ಉಪನ್ಯಾಸ ಗ್ರಂಥಮಾಲೆ

೮೫

# ಮಹಮೂದ ಗವಾನ

ಎಲ್. ಆರ್. ಕುಲಕರಣಿ




ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ

ಮೇ ೧೯೬೯

## ಉಪನ್ಯಾಸ ಗ್ರಂಥಮಾಲೆಯ ಪುಸ್ತಕಗಳು

### ಬೆಲೆ: ಪ್ರತಿ ಒಂದಕ್ಕೆ ೨೫ ಪೈಸೆ

೧ ಭವಭೂತಿ (ದ್ವಿ. ಮು.)—ಕೆ. ಕೃಷ್ಣಮೂರ್ತಿ
೨ ಮನೋರೋಗಗಳು (ತೃ. ಮು.)—ಎನ್. ಆರ್. ಕುಲಕರ್ಣಿ
೩ ಪ್ರಥಮ ಪಂಚವಾರ್ಷಿಕ ಯೋಜನೆ ಹಾಗೂ ಒಕ್ಕಲುತನ —ಎಸ್. ಪಿ. ಪಾಟೀಲ
೪ ಗಾದೆಗಳು (ಚ. ಮು.) —ಎ. ಕೆ. ರಾಮಾನುಜನ್
೫ ಭಾರತದಲ್ಲಿ ಜಾತಿಪದ್ಧತಿ (ದ್ವಿ. ಮು.) —ವಿಕ್ಟರ ಎಸ್. ಡಿಸೋಜಾ
೬ ಕೀಟಕ ಪಿಡುಗುಗಳ ಸಮೀಕ್ಷಣೆ (ದ್ವಿ. ಮು.)—ಎಸ್. ಎಸ್. ಕಟಗಿಹಳ್ಳಿಮಠ
೭ ರಾಜಕೀಯ ಪಕ್ಷಗಳು (ದ್ವಿ. ಮು.)—ಎನ್. ರಾಜಗೋಪಾಲರಾವ
೮ ಸ್ವಾದಿ ಅರಸುಮನೆತನ ( ,, ) —ಸ. ಸ. ಮಾಳವಾಡ
೯ ಮಕ್ಕಳ ಶಿಕ್ಷಣ (ತೃ. ಮು.) —ಡಿ. ಎಸ್. ಕರ್ಕಿ
೧೦ ಮೂಢ ನಂಬಿಕೆಗಳು ( ,, ) —ಎಲ್. ಆರ್. ಹೆಗಡೆ
೧೧ ಸಂಸ್ಕೃತ ಕವಯಿತ್ರಿಯರು (ದ್ವಿ. ಮು.) —ಕೆ. ಟಿ. ಪಾಂಡುರಂಗಿ
೧೨ ನಿತ್ಯಜೀವನದಲ್ಲಿ ರಸಾಯನಶಾಸ್ತ್ರ( ,, ) —ಬಿ. ವಿರೂಪಾಕ್ಷಪ್ಪ
೧೩ ಸಾರ್ವಜನಿಕ ಆಡಳಿತ ( ,, ) —ಜಿ. ಎಸ್. ಹಾಲಪ್ಪ
೧೪ ವಿಚಾರವಾದ ( ,, ) —ಗೌರೀಶ ಕಾಯ್ಕಿಣಿ
೧೫ ಮಹಾಕವಿ ಮಿಲ್ಟನ್ ( ,, ) —ಜಿ. ಎಸ್. ಆಮೂರ
೧೬ ಭಾರತದಲ್ಲಿ ಗ್ರಂಥಾಲಯ ಪ್ರಸಾರ( ,, ) —ಕೆ. ಎಸ್. ದೇಶಪಾಂಡೆ
೧೭ ಭಾರತೀಯ ನಾಗರಿಕತೆಗೆ ಮನುವಿನ ಕೊಡುಗೆ (ದ್ವಿ. ಮು.) —ಬಿ. ಎಚ್. ಶ್ರೀಧರ
೧೮ ಜನಸಂಖ್ಯೆ ಹಾಗೂ ಆಹಾರ ಸಮಸ್ಯೆ —ಪಿ. ಎಂ. ಉಮಾಕಾಂತಶಾಸ್ತ್ರಿ

[ ಪುಸ್ತಕದ ಕೊನೆಯ ಪುಟಕ್ಕೆ ಮುಂದುವರೆದಿದೆ ]

ಉಪನ್ಯಾಸ ಗ್ರಂಥಮಾಲೆ

೬೫

# ಮಹಮೂದ ಗವಾನ

ಎಲ್. ಆರ್. ಕುಲಕರಣಿ



ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ

ಮೇ ೧೯೬೯

ಪ್ರಕಾಶಕರು :

**ಎಸ್. ಎಸ್. ಒಡೆಯರ,**

ಎಂ. ಎ., ಎಲ್ಎಲ್. ಬಿ.

ರಜಿಸ್ಟ್ರಾರ್,

ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಪ್ರಥಮ ಮುದ್ರಣ : ಮೇ ೧೯೬೯–೨೦೦೦ ಪ್ರತಿಗಳು



**ಬೆಲೆ : ೨೫ ಪೈಸೆ**

ಮುದ್ರಕರು :

**ಕೆ. ಜಿ. ಜೋಶಿ**

ಸೆಕ್ರೆಟರಿ, ಕೆ. ಇ. ಬೋರ್ಡ

ಕೆ. ಇ. ಬೋರ್ಡ್ಸ ಪ್ರಿಂಟಿಂಗ ಪ್ರೆಸ್

ಧಾರವಾಡ–೧

# ಮುನ್ನುಡಿ

ನಮ್ಮ ವಿಶ್ವವಿದ್ಯಾಲಯದ ವ್ಯಾಸಂಗ ವಿಸ್ತರಣ ವಿಭಾಗವು ಗ್ರಾಮಾಂತರ ಪ್ರದೇಶಗಳಲ್ಲಿ ಪ್ರತಿ ತಿಂಗಳು ಏರ್ಪಡಿಸುತ್ತಿರುವ ಉಪನ್ಯಾಸ ಶಿಬಿರಗಳು ದಿನೇ ದಿನೇ ಜನಪ್ರಿಯವಾಗುತ್ತ ಸಾಗಿರುವುದು ನಿಜವಾಗಿಯೂ ಸಂತೋಷದ ಸಂಗತಿ. ಈ ಜ್ಞಾನ ಪ್ರಸಾರದ ಕಾರ್ಯದಲ್ಲಿ ಭಾಗವಹಿಸುವುದರಿಂದ ವಿಶ್ವವಿದ್ಯಾಲಯದ ಹಾಗೂ ಕಾಲೇಜುಗಳ ಅಧ್ಯಾಪಕರಿಗೆ ಆಯಾ ಪ್ರದೇಶದ ಜನತೆಯೊಡನೆ ಹೆಚ್ಚಿನ ಸಂಪರ್ಕವೊದಗುವದಲ್ಲದೆ ಎಂಥ ವಿಷಯವನ್ನಾದರೂ ಕನ್ನಡದಲ್ಲಿ ತಿಳಿಸಿ ಹೇಳುವ ಹಾಗೂ ಅದನ್ನು ಸುಲಭವಾದ ಶೈಲಿಯಲ್ಲಿ ಬರೆವಣಿಗೆಯಲ್ಲಿಳಿಸುವ ಅವಕಾಶ ದೊರೆಯುತ್ತದೆ. ಈ ಕಾರ್ಯದಲ್ಲಿ ಅವರೆಲ್ಲರೂ ಮನಮುಟ್ಟಿ ಸಹಕರಿಸುತ್ತಿರುವುದು ಶ್ಲಾಘನೀಯ.

ಈ ಮಾಲೆಯಲ್ಲಿ ಈಗಾಗಲೆ ಎಂಬತ್ತನಾಲ್ಕು ಗ್ರಂಥಗಳು ಪ್ರಕಟವಾಗಿವೆ. ಅಚ್ಚಾಗಿ ಹೊರಬಂದೊಡನೆ ಅವುಗಳ ಸಾವಿರಾರು ಪ್ರತಿಗಳನ್ನು ಜನರು ಕೊಂಡು ಓದುತ್ತಾರೆ. ಅನೇಕ ಪುಸ್ತಕಗಳು ಮೂರು–ನಾಲ್ಕು ಮುದ್ರಣಗಳನ್ನೂ ಕಂಡಿರುವುದು ಈ ಮಾಲೆಯ ಉಪಯುಕ್ತತೆಯನ್ನೂ ಜನಪ್ರಿಯತೆಯನ್ನೂ ವ್ಯಕ್ತಗೊಳಿಸುತ್ತದೆ. ಇದು ನಾಡಿನ ಪ್ರಗತಿಯ ಚಿಹ್ನೆಯೆಂದು ಭಾವಿಸುತ್ತೇನೆ.

ವಿಶ್ವವಿದ್ಯಾಲಯದ ಧನಸಹಾಯ ಆಯೋಗದವರು ಉಪನ್ಯಾಸ ಶಿಬಿರಗಳಿಗೂ, ಈ ಪುಸ್ತಿಕೆಗಳ ಪ್ರಕಟನೆಗೂ ನೆರವು ನೀಡುತ್ತಿದ್ದು ಅವರಿಗೆ ವಿಶ್ವವಿದ್ಯಾಲಯವು ತನ್ನ ಕೃತಜ್ಞತೆಗಳನ್ನು ಸೂಚಿಸುತ್ತದೆ.

ವಿಶ್ವವಿದ್ಯಾಲಯದ ಈ ಸೇವೆಯ ಸಂಪೂರ್ಣ ಪ್ರಯೋಜನ ಪಡೆದು ಸಾಮಾನ್ಯ ಜನತೆ ನಾಡಿನ ಸರ್ವತೋಮುಖವಾದ ಪ್ರಗತಿಯಲ್ಲಿ ಪಾಲುಗೊಳ್ಳಲೆಂದು ಹಾರೈಸುತ್ತೇನೆ.

**ಎ. ಎಸ್. ಅಡಕೆ**
ಕುಲಪತಿ
ಕರ್ನಾಟಕ ವಿಶ್ವವಿದ್ಯಾಲಯ

ಧಾರವಾಡ
೧-೫-೧೯೭೬

# ಅರಿಕೆ

ಗುಲಬರ್ಗಾ ಜಿಲ್ಹೆಯ ಕೆಂಭಾವಿ ಗ್ರಾಮದಲ್ಲಿ ಕರ್ನಾಟಕ ವಿಶ್ವವಿದ್ಯಾಲಯವು ಏರ್ಪಡಿಸಿದ ೧೨೦ನೆಯ ವ್ಯಾಸಂಗ ವಿಸ್ತರಣ ಉಪನ್ಯಾಸ ಶಿಬಿರದಲ್ಲಿ "ಮಹಮೂದ ಗವಾನ"ನ ಬಗೆಗೆ ಮಾತನಾಡುವ ಅವಕಾಶ ನನಗೆ ದೊರೆತಿತ್ತು. ಆಗ ಅಲ್ಲಿ ಮಾತನಾಡಿದುದನ್ನೇ ಈ ಪ್ರಬಂಧ ರೂಪದಲ್ಲಿ ಸಿದ್ಧಗೊಳಿಸಿದ್ದೇನೆ.

ಮಹಮೂದ ಗವಾನನ ಬಗೆಗೆ ಉಪಲಬ್ಧವಿದ್ದ ಹಾಗೂ ಸಾಧ್ಯವಿದ್ದ ಎಲ್ಲ ವಿಷಯವನ್ನೂ ಕಲೆಹಾಕಿ, ಐತಿಹಾಸಿಕ ಸಂಗತಿಗೆ ವಿಸಂಗತವಾಗದಂತೆ ಇಲ್ಲಿ ವಿವರಿಸಲು ಯತ್ನಿಸಿದ್ದೇನೆ. ಈ ಕಾರ್ಯದಲ್ಲಿ ಕೆಲವು ಗ್ರಂಥಕರ್ತರ ನೆರವು ಪಡೆದಿದ್ದೇನೆ. ಅವರಿಗೆ ನಾನು ಕೃತಜ್ಞ.

೧೨೦ನೆಯ ಉಪನ್ಯಾಸ ಶಿಬಿರದಲ್ಲಿ ನನಗೆ ಮಾತನಾಡುವ ಅವಕಾಶ ನೀಡಿದ್ದಕ್ಕಾಗಿ ಹಾಗೂ ಅದೇ ಭಾಷಣವನ್ನು ಇಂದು ಪ್ರಬಂಧ ರೂಪದಲ್ಲಿ ಬೆಳಕಿಗೆ ತಂದುದಕ್ಕಾಗಿ ವ್ಯಾಸಂಗ ವಿಸ್ತರಣ ಶಾಖೆಯ ನಿರ್ದೇಶಕರಿಗೂ ವಿಶ್ವವಿದ್ಯಾಲಯದ ಅಧಿಕಾರಿಗಳಿಗೂ ನಾನು ಋಣಿಯಾಗಿದ್ದೇನೆ.

ಬಿ. ವ್ಹಿ. ಬಿ. ಕಾಲೇಜ,
ಬೀದರ
೧–೫–೧೯೭೬

**ಎಲ್. ಆರ್. ಕುಲಕರ್ಣಿ**

# ಪರಿವಿಡಿ

# ಮಹಮೂದ ಗವಾನ

ಬಹಮನಿ ರಾಜ್ಯದ ಇತಿಹಾಸದಲ್ಲಿ ಮಹಮೂದ ಗವಾನ ಅತ್ಯಂತ ಹೆಸರಾಂತ ವ್ಯಕ್ತಿ. ಗವಾನ, ಪ್ರಧಾನ ಮಂತ್ರಿಯಾಗಿ, ಧೀರ-ಸೈನಿಕನಾಗಿ, ಬಹಮನಿ ರಾಜರ ಆಪ್ತ ಸೇವಕನಾಗಿ ಸೇವೆ ಸಲ್ಲಿಸಿ ಬಹಮನಿ ರಾಜ್ಯದ ಘನತೆಗೆ ಹಾಗೂ ಏಳ್ಗೆಗೆ ಕಾರಣನಾಗಿದ್ದಾನೆ. ಗವಾನನ ಪ್ರಾಮಾಣಿಕತನ, ಶ್ರದ್ಧೆ, ನಿಷ್ಠೆ, ಧೀರತನ ಮುಂತಾದವುಗಳು ಅವನ ವ್ಯಕ್ತಿತ್ವವನ್ನು ಇನ್ನಿಷ್ಟು ಹೆಚ್ಚಿಸಿದವು. ಅಂತೆಯೇ ಮಹಮೂದ ಗವಾನ ಬಹಮನಿ ರಾಜ್ಯದ ಧೀರ ವ್ಯಕ್ತಿಗಳ ಮಾಲಿಕೆಯಲ್ಲಿ ಉನ್ನತ ಸ್ಥಾನ ಗಳಿಸಿದ್ದಾನೆ.

## ಕಾಲ-ದೇಶ-ಜನನ-ಶಿಕ್ಷಣ

ಐತಿಹಾಸಿಕ ದಾಖಲೆಗಳ ಮೇಲೆ ಹೇಳುವದಾದರೆ, ಮಹಮೂದ ಗವಾನ ಇರಾಣ ದೇಶದಿಂದ ಭಾರತಕ್ಕೆ ಬಂದನೆಂದು ನಮೂದಾಗಿದೆ. ಗವಾನ ಇರಾಣದ 'ಗಿಲನ' ಎಂಬ ಪ್ರಾಂತದ 'ಖವಾನ' ಎಂಬ ಹಳ್ಳಿಯಲ್ಲಿ ಜನಿಸಿದನೆಂದೂ ತಿಳಿದಿದೆ.

'ಖಾವಾನ' ಎಂಬ ಹಳ್ಳಿಯ ಹೆಸರಿನಿಂದಲೇ ಅವನಿಗೆ ಗವಾನ ಎಂಬ ಹೆಸರು ರೂಢಿಯಲ್ಲಿ ಬಂದಿತು. ಮಹಮೂದ ಗವಾನ ಜನಿಸಿದ ಕಾಲ ಕ್ರಿ. ಶ. ೧೪೦೫. ಗವಾನನ ಮನೆತನ ಶ್ರೀಮಂತಿಕೆ ಯಲ್ಲಿ ಹಾಗೂ ರಾಜಕೀಯ ರಂಗದಲ್ಲಿ ಸಾಕಷ್ಟು ಪ್ರತಿಷ್ಠೆಯನ್ನು ಗಳಿಸಿತ್ತು. ಗವಾನನ ಕಕ್ಕ ಅಮೀರ ಶಮಶುದ್ದೀನ ಗಿಲನ ಬಾದ ಶಹನ ದರ್ಬಾರಿನಲ್ಲಿ ಮಂತ್ರಿಯಾಗಿದ್ದ. ಗವಾನನ ಶಿಕ್ಷಣ ಅವನ ಕಕ್ಕನ ನೇತೃತ್ವದಲ್ಲಿಯೇ ಸಾಗಿತು. ಬಾಲ್ಯದಲ್ಲಿಯೇ ಗವಾನ ಒಳ್ಳೇ ಮೇಧಾವಿಯಾಗಿದ್ದ. ರಾಜ್ಯದ ಆಡಳಿತದ ವಿಷಯ ದಲ್ಲಿಯೂ ಗವಾನನನಿಗೆ ಒಳ್ಳೇ ಅನುಭವ ಬಾಲ್ಯದಲ್ಲಿಯೇ ದೊರೆ ಯಿತು; ಏಕೆಂದರೆ ಅವನ ಕಕ್ಕನ ಕಾರ್ಯಭಾರದಲ್ಲಿ ಗವಾನ ಸಹಾಯ ಮಾಡುತ್ತಿದ್ದ. ಗವಾನನಲ್ಲಿ ವ್ಯಾಪಾರದ ಅಭಿರುಚಿಯೂ ಇತ್ತು. ಆ ಕಾರಣದಿಂದ ಬೇರೆ ಬೇರೆ ದೇಶಗಳಿಗೆ ಹೋಗುತ್ತಿದ್ದ. ಅಲ್ಲದೆ ಅಲ್ಲಿಯ ಮೇಧಾವಿ ಹಾಗೂ ಧಾರ್ಮಿಕ ಜನರೊಡನೆ ತನ್ನ ಸಂಪರ್ಕ ಬೆಳೆಸುತ್ತಿದ್ದ; ಹಾಗೂ ಗವಾನನಿಗೆ ಬಾಲ್ಯದಲ್ಲಿಯೇ ಸಾಹಿತ್ಯದ ಕಡೆಗೆ ಒಲವು ಸಾಕಷ್ಟಿತ್ತು.

ಗಿಲನ ಪ್ರಾಂತದಲ್ಲಿ ಕೆಲದಿನಗಳ ನಂತರ ರಾಜಕೀಯ ಸ್ವರೂ ಪದ ಅಂತಃಕಲಹ ಪ್ರಾರಂಭವಾಯಿತು. ಆ ಕಾರಣದಿಂದ ಗವಾನನ ಕಕ್ಕ ಅಮೀರ ಶಮಶುದ್ದೀನ ತನ್ನ ಮಂತ್ರಿ ಪದವಿಯನ್ನೇ ತ್ಯಜಿಸಿ ಬಾದಶಹನ ದರ್ಬಾರಿನಿಂದ ಹೊರಗೆ ಬಂದ. ಅಲ್ಲದೆ ಮನಶ್ಶಾಂತಿ ಗಾಗಿ ಮಕ್ಕಾಯಾತ್ರೆ ಕೈಕೊಂಡ. ಅದೇ ಸಮಯದಲ್ಲಿ ಗವಾನನ ಕಕ್ಕನ ಮಗನು ಗಿಲನ ಬಾದಶಹನ ದರ್ಬಾರಿನಲ್ಲಿ ತನ್ನ ತಂದೆಯ ಮಂತ್ರಿ ಸ್ಥಾನವನ್ನು ಗಳಿಸಿದ. ಆದರೆ ತಂದೆಯಂತೆ ಮಗನಲ್ಲಿ

ಆಡಳಿತ ನಡೆಸುವ ಯೋಗ್ಯತೆ ಇಲ್ಲದಿರುವದರಿಂದ ಬಾದಶಹನು ಅವನನ್ನು ತನ್ನ ದರ್ಬಾರಿನಿಂದ ಹೊರತಳ್ಳಿದ. ಇವೆಲ್ಲ ಘಟನೆ ಗಳು ಗವಾನನ ಮನಸ್ಸಿನ ಮೇಲೆ ಪರಿಣಾಮ ಬೀರಿದವು. ನಂತರ ಗವಾನ ತನ್ನ ದೇಶದ ದುರದೃಷ್ಟಕರ ರಾಜಕೀಯ ಸ್ಥಿತಿಯನ್ನು ಸಹಿಸಲಾರದೇ ವ್ಯಾಪಾರದ ಉದ್ದೇಶವಿರಿಸಿಕೊಂಡು ಭಾರತಕ್ಕೆ ಪ್ರಯಾಣ ಬೆಳೆಸಲು ಯೋಚಿಸಿದನು. ಅದೇ ಕಾಲಕ್ಕೆ ಮಹಮೂದ ಗವಾನನಿಗೆ, ಸಿರಿಯಾ, ಇರಾಕ ಹಾಗೂ ಖೊರಾಸಾನ ಮುಂತಾದ ಅರಸರಿಂದ ಪ್ರಧಾನ ಮಂತ್ರಿಪದ ಸ್ವೀಕಾರ ಮಾಡಲು ಆಮಂತ್ರಣ ಗಳು ಬಂದಿದ್ದವು. ಆದರೆ ಗವಾನ ಇವೆಲ್ಲವನ್ನೂ ನಿರಾಕರಿಸಿದನು. ಗವಾನನಿಗೆ ಅಧಿಕಾರದ ಲಾಲಸೆಯೇ ಇರಲಿಲ್ಲ; ಹಾಗೂ ಸ್ವತಂತ್ರ ಜೀವನದ ಇಚ್ಛೆ ಅವನಲ್ಲಿ ಪ್ರಬಲವಾಗಿತ್ತು.

## ಬೀದರ ಪ್ರವೇಶ

ವ್ಯಾಪಾರದ ಉದ್ದೇಶವನ್ನಿರಿಸಿಕೊಂಡ ಗವಾನ ಪ್ರಥಮತಃ ದಕ್ಷಿಣ ಭಾರತಕ್ಕೆ ಬಂದ. ಗವಾನನು ಬೀದರಕ್ಕೆ ಬಂದ ಕಾಲ ಕ್ರಿ. ಶ. ೧೪೪೫. ಆಗ ಅವನಿಗೆ ಸುಮಾರು ೪೫ ವರುಷ ವಯಸ್ಸು. ಮಹಮೂದ ಗವಾನ ಬೀದರಕ್ಕೆ ಬರಲು ಕೇವಲ ವ್ಯಾಪಾರದ ಉದ್ದೇಶವೇ ಮುಖ್ಯವಾಗಿರಲಿಲ್ಲ. ಬೀದರದಲ್ಲಿ ಶಹಮುಜೀ ಬುಲ್ಲಾ ಕಿರಮಾನಿ ಎಂಬ ಹೆಸರಾಂತ ಧಾರ್ಮಿಕ ವ್ಯಕ್ತಿಯಿದ್ದ. ಅವನನ್ನು ಸಂದರ್ಶಿಸುವುದು ಬಹುಶಃ ಗವಾನನ ಉದ್ದೇಶವಿದ್ದಿರ ಬಹುದು. ಅದೂ ಅಲ್ಲದೆ, ಬೀದರ ನಗರ ಬಹಮನಿ ರಾಜ್ಯದ ರಾಜಧಾನಿಯ ಸ್ಥಳವಾಗಿ ಮಾರ್ಪಟ್ಟಿತ್ತು. ಈ ಮೇಲಿನ ಕಾರಣ

ಗಳಿಗಾಗಿ ಮಹಮೂದ ಗವಾನ ಬೀದರಕ್ಕೆ ಬಂದಿರಬಹುದಾಗಿ ನಂಬಲಾಗಿದೆ.

## ಭಾರತದ ಹಾಗೂ ಬಹಮನಿ ರಾಜ್ಯದ ರಾಜಕೀಯ ಸ್ಥಿತಿ

ಮಹಮೂದ ಗವಾನ ಭಾರತಕ್ಕೆ ಬಂದಾಗಿನ ನಮ್ಮ ದೇಶದ ರಾಜಕೀಯ ಸ್ಥಿತಿಯನ್ನಷ್ಟು ನಾವು ಅವಲೋಕಿಸೋಣ. ದಿಲ್ಲಿಯಲ್ಲಿ ಲೋದಿ ಮನೆತನ ರಾಜಕೀಯ ರಂಗದಲ್ಲಿ ತನ್ನ ಪ್ರಭುತ್ವವನ್ನು ಕಳೆದುಕೊಂಡಿತ್ತು. ಮುಖ್ಯವಾಗಿ ಕೇಂದ್ರದ ಆಡಳಿತ ವ್ಯವಸ್ಥೆ ಶಿಥಿಲವಾಗಿತ್ತು. ಪಶ್ಚಿಮ ಪಂಜಾಬದಲ್ಲಿ ಜೋನಪುರ, ರಾಜಪುತಾನ, ಗುಜರಾತ ಹಾಗೂ ಮಾಳವಾ ಮುಂತಾದ ರಾಜ್ಯಗಳಲ್ಲಿ ಮಾಂಡಲಿಕರು ಹಾಗೂ ಸರದಾರರು ಸ್ವತಂತ್ರರಾಗಲು ಹವಣಿಸುತ್ತಿದ್ದರು. ಅದೇ ರೀತಿ, ದಕ್ಷಿಣ ಭಾರತದಲ್ಲಿ ಬಹಮನಿ ರಾಜ್ಯ ಗುಲಬುರ್ಗಾದಿಂದ ಬೀದರಕ್ಕೆ ತನ್ನ ರಾಜಧಾನಿಯ ಸ್ಥಳವನ್ನು ಬದಲಿಸಿತ್ತು; ಹಾಗೂ ಬಹಮನಿ ರಾಜ್ಯ ವೈಭವದ ಸ್ಥಿತಿಯಲ್ಲಿತ್ತು. ವಿಜಯನಗರ ಸಾಮ್ರಾಜ್ಯ ಮಲಬಾರ, ಕೊಂಕಣ, ತುಂಗಭದ್ರಾ ಹಾಗೂ ಕೃಷ್ಣಾನದಿ ತೀರಗಳ ಪ್ರದೇಶಗಳ ವರೆಗೂ ವಿಸ್ತಾರವಾಗಿ ಹಬ್ಬಿತ್ತು. ಮೇಲಾಗಿ ಬಹಮನಿ ರಾಜ್ಯದ ಅಳರಸರಲ್ಲಿ ಹಾಗೂ ವಿಜಯನಗರದ ಅರಸರಲ್ಲಿ ಮೇಲಿಂದ ಮೇಲೆ ಯುದ್ಧಗಳು ಜರುಗುತ್ತಿದ್ದವು. ಮುಖ್ಯವಾಗಿ ಎರಡೂ ರಾಜ್ಯಗಳ ಅರಸರು ಪರಸ್ಪರ ರಾಜ್ಯಗಳ ವಿಸ್ತರಣೆಗಾಗಿ ಹವಣಿಸುತ್ತಿದ್ದರು.

ಇನ್ನು ಬೀದರದ ರಾಜಕೀಯ ಸ್ಥಿತಿಯನ್ನಷ್ಟು ನಾವು ವೀಕ್ಷಿ

ಹೋಯಿತು. ಬೀದರ ನಾಡಿನಲ್ಲಿ ರಾಜಕೀಯ ಅಂತಃಕಲಹ ಉತ್ಕರ್ಷಾವಸ್ಥೆಯಲ್ಲಿತ್ತು. ಬೀದರದ ಮುಸಲ್ಮಾನರು ಅನ್ಯದೇಶದಿಂದ ಬಂದ ಮುಸಲ್ಮಾನರೊಡನೆ ಸಹಕರಿಸಲು ಸಿದ್ಧರಿರಲಿಲ್ಲ. ಅನ್ಯದೇಶದ ಮುಸಲ್ಮಾನರಿಗೆ ರಾಜಕೀಯ ರಂಗದಲ್ಲಿ ಅಧಿಕಾರವೇನಾದರೂ ದೊರೆತರೆ ಬೀದರದ ಜನತೆಯ ದ್ವೇಷಾಸೂಯೆ ಮಿತಿಮೀರುತ್ತಿತ್ತು. ರಾಜಕೀಯ ಕೊಲೆಗಳು ಸಾಕಷ್ಟು ನಡೆಯುತ್ತಿದ್ದವು. ಬೀದರದ ದೊರೆ ಅಹಮ್ಮದಶಹನ ಕಾಲದಲ್ಲಿ ಇಂಥ ರಾಜಕೀಯ ದುರದೃಷ್ಟಕರ ಸ್ಥಿತಿ ನೆಲೆಯೂರಿತ್ತು. ಅಹಮ್ಮದಶಹನು ಆದರ್ಶವಾದಿಯೂ ನ್ಯಾಯ ಪಕ್ಷಪಾತಿಯೂ ಆಗಿದ್ದನಲ್ಲದೆ ಅಂತಃಕಲಹಗಳನ್ನು ಶಮನ ಮಾಡಲು ಪ್ರಯತ್ನಿಸುತ್ತಿದ್ದ. ಆವನ ಮರಣದ ತರುವಾಯ ಆವನ ಮಗ ೨ನೇ ಅಲ್ಲಾಉದ್ದೀನ ಬಹುಮನಿ ಪಟ್ಟಕ್ಕೆ ಬಂದ ಮೇಲೆ ಬೀದರದಲ್ಲಿ ರಾಜಕೀಯ ಕೋಲಾಹಲ ಇನ್ನಷ್ಟು ಅಧಿಕವಾಯಿತು. ಇಂಥ ರಾಜಕೀಯ ಕೋಲಾಹಲದ ಸ್ಥಿತಿಯಲ್ಲಿಯೇ ಮಹಮೂದ ಗವಾನ ಬೀದರಕ್ಕೆ ಪ್ರವೇಶ ಮಾಡಿದನು.

## ರಾಜಕೀಯದಲ್ಲಿ ಪ್ರವೇಶ

ಮಹಮೂದ ಗವಾನ ಬೀದರಿನ ರಾಜಕೀಯ ರಂಗದಲ್ಲಿ ಪ್ರವೇಶ ಮಾಡಿದ್ದು ಒಂದು ಆಕಸ್ಮಿಕ ಘಟನೆಯೆಂದೇ ಹೇಳಬೇಕು. ಗವಾನನಿಗೆ ಬೀದರಿನ ಹೆಸರಾಂತ ಧಾರ್ಮಿಕ ಸತ್ಪುರುಷ ಮುಜೀಬುಲ್ಲಾ ಕಿರಮಾನಿ ಅವನನ್ನು ಭೇಟ್ಟಿಯಾಗುವದೇ ಮೂಲ ಉದ್ದೇಶವಾಗಿತ್ತು. ಆದರೆ ಈ ಭೇಟ್ಟಿ ಗವಾನನನ್ನು ರಾಜಕೀಯ

ರಂಗಕ್ಕೆ ಎಳಿದೊಯ್ದಿತು. ಗವಾನ ೨ನೇ ಅಲ್ಲಾಉದ್ದೀನನ ದರ್ಬಾರನ್ನು ಸಂದರ್ಶಿಸಿದ. ಬಹಮನಿ ರಾಜ್ಯದ ದೊರೆ ಗವಾನನ ಬಗೆಗೆ ಸಾಕಷ್ಟು ಕೇಳಿ ತಿಳಿದುಕೊಂಡಿದ್ದ. ಅಲ್ಲದೆ ಗವಾನನ ನಿಷ್ಠೆ, ಶ್ರದ್ಧೆ, ಪ್ರಾಮಾಣಿಕತನ ದೊರೆಯ ಮನಸ್ಸನ್ನು ಸೂರೆಗೊಂಡವು. ಬಹಮನಿ ದೊರೆ ಗವಾನನಿಗೆ ತನ್ನ ದರ್ಬಾರಿನಲ್ಲಿ ಒಂದು ಸ್ಥಾನ ನೀಡಿದ. ಗವಾನನಿಗೆ ಅಧಿಕಾರದ ಆಶೆ ಇರಲಿಲ್ಲ. ಆದರೆ ದೊರೆಯ ಗೌರವ, ಪ್ರೀತಿಯನ್ನು ಧಿಕ್ಕರಿಸಿ ಹೋಗುವದು ಆಗಲಿಲ್ಲ. ಬಹಮನಿ ದೊರೆಗೆ ನಿಷ್ಠಾವಂತ ವ್ಯಕ್ತಿ ರಾಜ್ಯದ ರಾಜಕೀಯ ಕೋಲಾಹಲವನ್ನು ಸದೆಬಡೆಯಲು ಅವಶ್ಯವಾಗಿ ಬೇಕಾಗಿತ್ತು. ಇವೆಲ್ಲವುಗಳಿಂದಾಗಿ ಗವಾನ ಬೀದರಿನಲ್ಲಿಯೇ ನೆಲೆಸಬೇಕಾಗಿ ಬಂತು. ಗವಾನ ತನ್ನ ಜೀವಮಾನವನ್ನೇ ಬಹಮನಿ ಅರಸರ ಉತ್ಕರ್ಷಕ್ಕೆ ಮುಡಿಪಾಗಿಟ್ಟು ಸೇವೆ ಸಲ್ಲಿಸಿದ.

ಬಹಮನಿ ರಾಜ್ಯದ ದೊರೆ ೨ನೇ ಅಲ್ಲಾಉದ್ದೀನನ ಮರಣದ ನಂತರ ಆತನ ಮಗ ಹುಮಾಯೂನ ಬಹಮನಿ ರಾಜ್ಯದ ಅರಸನಾಗಿ ಪಟ್ಟಕ್ಕೆ ಬಂದ. ಹುಮಾಯೂನ ಅತ್ಯಂತ ಕ್ರೂರ ಹಾಗೂ ವಿಷಯಲಂಪಟನಾಗಿದ್ದ. ಇಂಥ ದೊರೆಯ ಸಹವಾಸದಲ್ಲಿಯೂ ಸಹ ಗವಾನ ಅತ್ಯಂತ ಪ್ರೀತಿಯ ಹಾಗೂ ನಿಷ್ಠಾವಂತ ಸೇವಕನಾಗಿ ಮೆರೆದ. ಹುಮಾಯೂನ ಕ್ರೂರನಾದರೂ ಗವಾನನನ್ನು ಆದರಿಸಲು ಮರೆಯಲಿಲ್ಲ. ಮಹಮೂದ ಗವಾನ ಹುಮಾಯೂನನ ದರ್ಬಾರಿನಲ್ಲಿ "ವ್ಯಾಪಾರಿಗಳ ರಾಜ" ಎಂಬ ಗೌರವ ಬಿರುದನ್ನೂ ಗಳಿಸಿದ.

ದೊರೆ ಹುಮಾಯೂನನ ನಿಧನದ ನಂತರ ನಿಝಾಮ

ಶಹನು ಪಟ್ಟಕ್ಕೆ ಬಂದ. ನಿಝಾಮ ಶಹನಿಗೆ ಆಗ ಕೇವಲ ಏಳು ವರುಷ. ಆದುದರಿಂದ ಬಹಮನಿ ರಾಜ್ಯದ ಎಲ್ಲ ಕಾರ್ಯಭಾರ ಮಹಮೂದ ಗವಾನನ ಮೇಲೆಯೇ ಬಿದ್ದಿತು. ಏಕೆಂದರೆ ಗವಾನ ಆಗಲೇ ಅತ್ಯಂತ ವಿಶ್ವಾಸದ ವ್ಯಕ್ತಿಯಾಗಿದ್ದ.

ರಾಜಕುಮಾರ ನಿಝಾಮ ಶಹನ ತಾಯಿ ರಾಣಿ ಮಕದುಮ ಜಹಾನ, ಗವಾನನನ್ನು ತನ್ನ ಸೋದರನಂತೆಯೇ ಭಾವಿಸಿ ಆದರಿಸಿದಳು. ಇದೇ ವೇಳೆಗೆ ಬಹಮನಿ ರಾಜ್ಯದ ರಾಜಕೀಯ ರಂಗದಲ್ಲಿ ಇನ್ನೊಬ್ಬ ವ್ಯಕ್ತಿ ಬೆಳಕಿಗೆ ಬಂದ. ಆತನೇ ತುರ್ಕ ಜಹಾ. ರಾಣಿ ಮಕದುಮ ಜಹಾನ, ಮಹಮೂದ ಗವಾನ, ಹಾಗೂ ತುರ್ಕ ಜಹಾ ಈ ಮೂವರೂ ರಾಜ್ಯದ ಆಡಳಿತದ ಕಾರ್ಯದಲ್ಲಿ ಪ್ರತಿಷ್ಠಿತ ವ್ಯಕ್ತಿಗಳಾಗಿದ್ದರು. ದುರ್ದೈವದಿಂದ ರಾಜಕುಮಾರ ನಿಝಾಮ ಶಹ ಎಳೆ ವಯಸ್ಸಿನಲ್ಲಿಯೇ ತೀರಿಕೊಂಡ. ಅವನ ತರುವಾಯ ೩ನೇ ಮಹಮ್ಮದ ಶಹನು ಪಟ್ಟಕ್ಕೆ ಬಂದ. ಅವನೂ ಕೂಡ ಕೇವಲ ೯ ವರುಷದ ಎಳೆಯ ರಾಜಕುಮಾರ. ತರುಣ ದೊರೆಯ ತಾಯಿ ರಾಣಿ ಮಕದುಮ ಜಹಾನ, ಮಹಮೂದ ಗವಾನ ಹಾಗೂ ತುರ್ಕ ಜಹಾ ಇವರಿಂದ ರಾಜ್ಯದ ಆಗು-ಹೋಗುಗಳನ್ನು ನೆರವೇರಿಸುತ್ತಿದ್ದಳು. ೩ನೇ ಮಹಮ್ಮದ ಶಹನ ಬೆಳವಣಿಗೆ ಗವಾನನ ಹೊಣೆಯೇ ಆಯಿತು. ಗವಾನನು ತರುಣ ದೊರೆಗೆ ಎಲ್ಲ ಬಗೆಯ ಜ್ಞಾನವನ್ನೂ ನೀಡಿದ. ಆಡಳಿತ ಸೂತ್ರದ ವಿವರಗಳನ್ನು ವಿವರಿಸಿದ. ಅವನನ್ನು ಪ್ರಾಮಾಣಿಕವಾಗಿ ನೋಡಿಕೊಂಡ.

ಇದೇ ಸಮಯದಲ್ಲಿ ಒಂದು ಅಸಂತೋಷದ ಘಟನೆ ನಡೆ

ಯಿತು. ತುರ್ಕ ಜಹಾ ಗವಾನನ ಪ್ರತಿಷ್ಠೆಯನ್ನು ಸಹಿಸದಾದ. ಹೇಗಾದರೂ ಮಾಡಿ ಗವಾನನನ್ನು ರಾಜಧಾನಿಯಿಂದ ಓಡಿಸಬೇಕೆಂಬುದೇ ಅವನ ಉದ್ದೇಶವಾಗಿತ್ತು. ಅಲ್ಲದೆ ಯುದ್ಧ ಪ್ರಸಂಗಗಳಲ್ಲೆಲ್ಲ ಗವಾನನನ್ನೇ ಯುದ್ಧಭೂಮಿಗೆ ಕಳಿಸುತ್ತಿದ್ದ. ತಾನು ಮಾತ್ರ ರಾಜ್ಯದ ಒಳಾಡಳಿತದಲ್ಲಿರುತ್ತಿದ್ದ. ಹೇಗಾದರೂ ಮಾಡಿ ಗವಾನ ಯುದ್ಧರಂಗದಲ್ಲಿ ಸಾಯಬೇಕೆಂಬುದೇ ಅವನ ಮನೀಷೆಯಾಗಿತ್ತು. ಜಹಾ ತುರ್ಕನ ಈ ಕುಹಕ ಯೋಜನೆ ರಾಣಿ ಮಕದೂಮ ಜಹಾನಳಿಗೆ ತಿಳಿದುಹೋಯಿತು. ರಾಣಿಯೇ ಸ್ವತಃ ಜಹಾ ತುರ್ಕನ ಮೇಲೆ ಸೇಡು ತೀರಿಸಿಕೊಳ್ಳಲು ಯೋಜನೆ ಮಾಡಿದಳು. ಅವನ ಮೇಲೆ ಬೇಕೆಂತಲೇ ಹಣದ ದುರುಪಯೋಗದ ಆರೋಪ ಹೊರಿಸಿ ಅವನನ್ನು ದರ್ಬಾರಿನಲ್ಲಿಯೇ ಕೊಲೆ ಮಾಡಿಸಿದಳು. ಆದರೆ ಮಹಮೂದ ಗವಾನನಿಗೆ ಇದರ ಬಗೆಗೆ ಯಾವ ವಿವರವೂ ಗೊತ್ತಿರಲಿಲ್ಲ. ಅವನಿಗೆ ನಿಷ್ಠಾವಂತ ಸೇವೆಯೇ ಮುಖ್ಯ. ಜಹಾ ತುರ್ಕನ ಕೊಲೆಯ ನಂತರ ಗವಾನ ಏಕೈಕ ಆಡಳಿತಗಾರನಾಗಿ ಬೆಳಕಿಗೆ ಬಂದ.

ಜಹಾ ತುರ್ಕನ ಕೊಲೆಯ ಕಾರಸ್ಥಾನದಲ್ಲಿ ಗವಾನನ ಕೈವಾಡವಿದೆ ಎಂದು ಭಾವಿಸುವದು ನ್ಯಾಯಕ್ಕೆ ವಿಪರೀತ. ಗವಾನನಿಗೆ ಅಧಿಕಾರಲಾಲಸೆ, ಹಾಗೂ ಸ್ವಾರ್ಥದ ಕಲ್ಪನೆ ಇರಲಿಲ್ಲ. ಅಲ್ಲದೆ ಗವಾನನು ಅಧಿಕಾರಕ್ಕಾಗಿ ಎಂದೂ ಹೀನ ಹಾಗೂ ದುಷ್ಕೃತ್ಯಕ್ಕೆ ಮನಸ್ಸು ಮಾಡಲಿಲ್ಲ. ೩ನೇ ಮಹಮ್ಮದ ಶಹನ ಕಾಲದಲ್ಲಿ ಗವಾನನ ಕೀರ್ತಿ, ಪ್ರತಿಷ್ಠೆ ಗಗನಕ್ಕೇರಿದವು. ಗವಾನನಿಗೆ "Lord of Lords" ಎಂಬ ಪದವಿಯೂ ಲಭಿಸಿತು.

ಹೀಗೆ ಮಹಮೂದ ಗವಾನ ರಾಜಕೀಯ ರಂಗದಲ್ಲಿ ಕೇಂದ್ರ ವ್ಯಕ್ತಿಯಾಗಿ ಮೆರೆದ.

## ಗವಾನನ ಸೈನಿಕ ದಿಗ್ವಿಜಯಗಳು

ಮಹಮೂದ ಗವಾನ ರಾಜಕೀಯ ರಂಗದಲ್ಲಿಯಂತೆ ಸೈನಿಕ ರಂಗದಲ್ಲಿಯೂ ಕೂಡ ಮಹತ್ವದ ಪಾತ್ರ ವಹಿಸಿದನು. ಬಹಮನಿ ರಾಜ್ಯದ ವಿಸ್ತಾರಕ್ಕೆ, ಸೈನಿಕ ಕೀರ್ತಿಗೆ ಗವಾನನೇ ಮೂಲ ಕಾರಣನೆಂದರೂ ನಡೆದೀತು. ಗವಾನನ ನೇತೃತ್ವದಲ್ಲಿ ಬಹಮನಿ ರಾಜ್ಯ ಮೊದಲಿಗಿಂತಲೂ ವಿಸ್ತಾರವಾಗಿ ಹಬ್ಬಿತು. ಗವಾನನ ಶೌರ್ಯ ಹಾಗೂ ಧೈರ್ಯದ ಹೆಗ್ಗಳಿಕೆ ಎಲ್ಲೆಡೆಯಲ್ಲಿ ಹಬ್ಬಿತು. "ಬರಹಾನ–ಏ–ಮಾಸೀರ"ದಲ್ಲಿ ಬರುವ ಅವತರಣಿಕೆಯಿಂದ ಗವಾನನ ಸೈನಿಕ ಪ್ರತಿಭೆಯನ್ನು ನಾವು ಅರಿತುಕೊಳ್ಳಬಹುದಾಗಿದೆ.

"This un–rivalled minister seized many forts and towns and captured immense booty and valuable goods such as horses, elephants, maidens and female slaves as well as precious jewels and pearls fell into the minister's hands."

ಕ್ರಿ. ಶ. ೧೪೬೯ ರಲ್ಲಿ ಕೊಂಕಣ ದೇಶದ ಮೇಲೆ ಏರಿ ಹೋದ. ಅಲ್ಲಿಯ ಹಿಂದೂ ಆಳರಸರನ್ನು ಸದೆಬಡಿದು ಕೊಂಕಣ ಪ್ರದೇಶವನ್ನು ಬಹಮನಿ ರಾಜ್ಯಕ್ಕೆ ಸೇರಿಸಿದ. ಸಂಗಮೇಶ್ವರದ ಕೋಟೆ ಗವಾನನಿಗೆ ಶರಣಾಗತವಾಯಿತು. ನಂತರ ಗವಾನನು

ಗೋವೆಯ ಮೇಲೆ ದಂಡೆತ್ತಿ ಹೋಗಿ ಅದನ್ನು ಗೆದ್ದುಕೊಂಡ. ಗೋವಾ ಆಗ ವಿಜಯನಗರದ ಅರಸರ ಅಧೀನದಲ್ಲಿತ್ತೆಂಬುದನ್ನು ನಾವಿಲ್ಲಿ ಸ್ಮರಿಸಬಹುದಾಗಿದೆ.

ಗವಾನನು ಆಂಧ್ರಪ್ರದೇಶದಲ್ಲಿ ನುಗ್ಗಿ, ರಾಜಮಹೇಂದ್ರಿ ಹಾಗೂ ಕೊಂಡವೀಡು ಕೋಟೆಗಳನ್ನು ನಿರಾಯಾಸವಾಗಿ ಗೆದ್ದುಕೊಂಡ. ಕ್ರಿ. ಶ. ೧೪೭೮ ರಲ್ಲಿ ಓರಿಸಾದ ದೊರೆ ಬಹಮನಿ ಸುಲ್ತಾನನಿಗೆ ಹೇರಳ ಕಪ್ಪ ಕಾಣಿಕೆ ಸಲ್ಲಿಸಿದ. ಇದು ಗವಾನನ ಸೈನಿಕ ಶಕ್ತಿಯ ಪ್ರಚಂಡ ಪ್ರತಿಭೆಯನ್ನು ಪ್ರಕಟಗೊಳಿಸುತ್ತದೆ. ಮುಂದೆ ಓರಿಸಾದ ಅರಸನು ಬಹಮನಿ ಸುಲ್ತಾನರಿಗೆ ಪ್ರತಿವರುಷವೂ ಕಪ್ಪಕಾಣಿಕೆಗಳನ್ನು, ಒಂಟೆ, ಆನೆ, ಕುದುರೆ, ವಜ್ರ-ವೈಡೂರ್ಯಗಳನ್ನು ಕಳಿಸುತ್ತಿದ್ದ. ಬಹಮನಿ ರಾಜ್ಯದ ಸೈನಿಕರು ಗವಾನನ ನೇತೃತ್ವದಲ್ಲಿ ಕಂಚಿ ಪಟ್ಟಣವನ್ನು ಮುತ್ತಿದರು. ಅಲ್ಲಿಯ ಪ್ರಾಚೀನ ಹಿಂದೂ ದೇವಾಲಯಗಳನ್ನು ನೆಲಸಮ ಮಾಡಿದರು. ಹೇರಳ ಹಣ ಹಾಗೂ ಸಂಪತ್ತಿನೊಂದಿಗೆ ರಾಜಧಾನಿಗೆ ಮರಳಿದರು.

ಸೈನಿಕ ರಂಗದಲ್ಲಿ ಗವಾನನ ದುರ್ದೆಶೆಯನ್ನೂ ನಾವು ನೋಡೋಣ. ಮಹಮೂದ ಗವಾನ ಮಾಳವೆಯ ಅರಸನೊಂದಿಗೆ ಯುದ್ಧದಲ್ಲಿ ಸೋತು ಹೋದ. ಮಾಳವೆಯ ದೊರೆ ಬೀದರಿನ ಕೋಟೆಯನ್ನು ವಶಪಡಿಸಿಕೊಂಡ. ರಾಣಿ ಮಕದುಮ ಜಹಾನ ಹಾಗೂ ೩ನೇ ಮುಹಮ್ಮದಶಹ ಇವರೀರ್ವರೂ ಗುಲಬರ್ಗಾಕ್ಕೆ ಧಾವಿಸಬೇಕಾಯಿತು. ಯುದ್ಧರಂಗದಲ್ಲಿ ಗವಾನನು ಸೋತನೆಂದ ಮಾತ್ರಕ್ಕೆ ಅವನ ಶೌರ್ಯ-ಧೈರ್ಯಕ್ಕೆ ಚ್ಯುತಿ

ಬಂದಂತೆ ಎಂದು ಭಾವಿಸುವದು ತಪ್ಪು. ತನಗೆ ಸೋಲಾದರೂ ಕೂಡ ಬಹಮನಿ ರಾಜ್ಯದ ಗೆಲುವನ್ನು ಕಾಣುವ ವರೆಗೆ ಅವನು ವಿಶ್ರಮಿಸಲಿಲ್ಲ. ಹೇಗಾದರೂ ಮಾಡಿ ಮಾಳವೆಯ ದೊರೆಯನ್ನು ಬೀದರಿನಿಂದ ಓಡಿಸುವದೇ ಅವನ ಗುರಿಯಾಗಿತ್ತು. ಅದಕ್ಕಾಗಿ ಮಹಮೂದ ಗವಾನ ಗುಜರಾತ ರಾಜ್ಯದ ಅರಸನೊಂದಿಗೆ ಸೈನಿಕ ಸಹಾಯದ ಬಗೆಗೆ ಪ್ರಯತ್ನ ಮಾಡಬೇಕಾಯಿತು. ಗವಾನನ ಸುದೈವವೆಂದೇ ಹೇಳಬೇಕು. ಗುಜರಾತದ ದೊರೆ ತನ್ನ ಸೈನ್ಯ ವನ್ನು ಗವಾನನ ಬೆಂಬಲಕ್ಕಾಗಿ ಕಳಿಸಿದ. ಈ ರೀತಿ ದೊರೆತ ಸೈನಿಕ ಸಹಾಯದಿಂದ ಗವಾನನು ಮಾಳವೆಯ ಸೈನ್ಯವನ್ನು ಬೀದರಿನಿಂದ ಓಡಿಸಿ ಕೋಟೆಯನ್ನು ಪುನಃ ವಶಪಡಿಸಿಕೊಂಡ. ಮತ್ತೊಂದು ಸಲ ಮಾಳವೆಯ ಸುಲ್ತಾನ ಬೀದರಿನ ಕೋಟೆ ಯನ್ನು ವಶಪಡಿಸಿಕೊಳ್ಳಲು ಪ್ರಯತ್ನಿಸಿದ. ಆದರೆ ಗವಾನ ತನ್ನೆಲ್ಲ ಶೌರ್ಯ ಧೈರ್ಯಗಳಿಂದ ಬಹಮನಿ ರಾಜ್ಯದ ರಾಜಧಾನಿ ಯನ್ನು ಸಂರಕ್ಷಿಸಿದ. ಈ ರೀತಿಯಾಗಿ ಗವಾನ ಕೆಲವೊಂದು ಸಮಯದಲ್ಲಿ ತನ್ನ ಚಾತುರ್ಯದಿಂದಲೂ ನೆರೆಯವರ ಸಹಾಯ ದಿಂದಲೂ ವೈರಿಯನ್ನು ಹಿಮ್ಮೆಟ್ಟಿಸಿದ; ಹಾಗೂ ಬಹಮನಿ ರಾಜ್ಯದ ಕೀರ್ತಿಪತಾಕೆಯನ್ನು ಹಾರಿಸಿದ.

ಮಹಮೂದ ಗವಾನ ಬಹಮನಿ ರಾಜ್ಯದ ಆಂತರಿಕ ವೈರಿ ಗಳನ್ನು ಸದೆಬಡಿಯುವಲ್ಲಿಯೂ ಅಪ್ರತಿಮ ಧೈರ್ಯ ತೋರಿಸಿದ. ತನ್ನ ಜೀವಮಾನದ ವರೆಗೂ ರಾಜ್ಯದ ಆಂತರಿಕ ಶಾಂತಿ ವ್ಯವಸ್ಥೆ ಗಳಿಗಾಗಿ ಗವಾನ ಸಾಕಷ್ಟು ಹೆಣಗಾಡಿದ್ದಾನೆ. ತೆಲಂಗಾಣದ ಸರದಾರನು ಬಹಮನಿ ರಾಜ್ಯದ ಸುಲ್ತಾನನು ನಿಧನನಾದನೆಂದು ಸುಳ್ಳು ಸುದ್ದಿ ಹಬ್ಬಿಸಿ ರಾಜಕೀಯ ಕೋಲಾಹಲದ ಲಾಭವನ್ನು

ಪಡೆದು ಬಹಮನಿ ರಾಜ್ಯವನ್ನು ಕಬಳಿಸುವ ಹೊಂಚು ಮಾಡಿದ. ಆದರೆ ಗವಾನನು ತಡಮಾಡದೆ ರಾಜ್ಯದ ಸೈನ್ಯವನ್ನು ಸಜ್ಜು ಗೊಳಿಸಿ ತೆಲಂಗಾಣ ಪ್ರದೇಶವನ್ನೂ ಮುತ್ತಿದ. ಸರದಾರನನ್ನು ಸೆರೆಹಿಡಿದು ಬೀದರ ಸುಲ್ತಾನನಿಗೆ ತಂದು ಒಪ್ಪಿಸಿದ. ಅಲ್ಲದೆ ತೆಲಂಗಾಣದ ಸರದಾರ ಬೀದರ ಸುಲ್ತಾನನ ವಿರುದ್ಧ ಎಂದೂ ದಂಗೆ ಏಳದಂತೆ ಗವಾನ ಎಚ್ಚರಿಕೆ ವಹಿಸಿದ. ಈ ಘಟನೆಯ ನಂತರ ಬಹಮನಿ ರಾಜ್ಯದ ಸರದಾರರೆಲ್ಲ ಗವಾನನ ಸೈನಿಕ ಶಕ್ತಿಯ ಎದುರು ಹೋಗಲು ಮನಸ್ಸು ಮಾಡಲಿಲ್ಲ; ಅದೂ ಅಲ್ಲದೆ ತಾವು ಸ್ವತಂತ್ರರಾಗಬೇಕೆಂಬ ಬಯಕೆಯನ್ನೇ ಮರೆತುಬಿಟ್ಟರು. ಬೀದರದ ಜನತೆ ಗವಾನನ ಸೈನಿಕ ದಿಗ್ವಿಜಯಗಳನ್ನು ಮನಸಾರೆ ಕೊಂಡಾಡಿದರು. ಬೀದರದ ಸುಲ್ತಾನನು ಮಹಮೂದ ಗವಾನನನ್ನು ಬಹುವಾಗಿ ಆದರಿಸಿ ಸತ್ಕರಿಸಿದ.

## ಗವಾನನ ಆಡಳಿತ ವ್ಯವಸ್ಥೆ ಹಾಗೂ ಸುಧಾರಣೆಗಳು

ರಾಜಕೀಯ ಹಾಗೂ ಸೈನಿಕ ರಂಗಗಳಲ್ಲಿಯಂತೆ, ಗವಾನ ಆಡಳಿತ ರಂಗದಲ್ಲಿಯೂ ಅದ್ವಿತೀಯ ವ್ಯಕ್ತಿಯಾಗಿ ಮೆರೆದ. ಅಷ್ಟೇ ಏಕೆ ಗವಾನ ಆ ಕಾಲದ ದಕ್ಷಿಣ ಭಾರತದ ಸರ್ವ ಶ್ರೇಷ್ಠ ಆಡಳಿತಗಾರನಾಗಿದ್ದನೆಂದು ಹೇಳಿದರೂ ಸರಿಯೇ.

ಮಹಮೂದ ಗವಾನ ಬಹಮನಿ ರಾಜ್ಯದ ಪ್ರಾರಂಭಿಕ ರಾಜ್ಯ ವ್ಯವಸ್ಥೆಯನ್ನು ಬದಿಗಿರಿಸಿ ತನ್ನದೇ ಆದ ವ್ಯವಸ್ಥೆಯನ್ನು ನಿರ್ಮಾಣ ಮಾಡಿದ. ಬಹಮನಿ ರಾಜ್ಯದ ಮೊದಲಿನ ನಾಲ್ಕು ವಿಭಾಗಗಳನ್ನು ವಿಸ್ತರಿಸಿ ಎಂಟು ವಿಭಾಗಗಳನ್ನಾಗಿ ವಿಂಗಡಿಸಿದ.

ಒಂದನೆಯದಾಗಿ, ಗುಲಬರ್ಗಾ ಹಾಗೂ ಆದರ ಸುತ್ತಲಿನ ಪ್ರದೇಶ. ಎರಡನೆಯ ವಿಭಾಗ ವಿಜಾಪುರ ಹಾಗೂ ಸುತ್ತಲಿನ ಪ್ರದೇಶ. ದೌಲತಾಬಾದ ಹಾಗೂ ಜೋನಪೂರ ಮೂರನೆ ಭಾಗ. ಬಿರಾರ ಹಾಗೂ ಗಾವಿಲ ಪ್ರದೇಶ ನಾಲ್ಕನೇ ವಿಭಾಗ. ತೆಲಂಗಾಣ ಐದನೇ ಭಾಗ. ರಾಜಮಹೇಂದ್ರಿ ಆರನೇ ಭಾಗ. ವರಂಗಲ್ಲ ಏಳನೇ ಭಾಗ ಹಾಗೂ ಬೀದರ ಎಂಟನೇ ವಿಭಾಗ. ಬೀದರ ಭಾಗ ಕೇಂದ್ರದ ಆಡಳಿತದಲ್ಲಿಯೇ ಇತ್ತು.

ಗವಾನನ ರಾಜ್ಯವ್ಯವಸ್ಥೆಯ ಮುಖ್ಯ ಅಂಶವೆಂದರೆ ಕೇಂದ್ರೀಕೃತ ವ್ಯವಸ್ಥೆ. ಬಹಮನಿ ರಾಜ್ಯದ ಸುಲ್ತಾನನೇ ಕೇಂದ್ರದ ಮುಖ್ಯ ಅಧಿಕಾರಿ. ರಾಜ್ಯದ ಎಲ್ಲ ಆಗುಹೋಗುಗಳು ಸುಲ್ತಾನನ ಅಧಿಕಾರದ ಮುಖಾಂತರವಾಗಿ ನಡೆಯಬೇಕು. ಮಹಮೂದ ಗವಾನ ಸುಲ್ತಾನನ ಅಧಿಕಾರವನ್ನು ತನ್ನ ಕೇಂದ್ರೀಕೃತ ಆಡಳಿತ ವ್ಯವಸ್ಥೆಯಿಂದ ಹೆಚ್ಚಿಸಿದ. ಮಹಮೂದ ಗವಾನ ಪ್ರಧಾನಮಂತ್ರಿಯಾಗಿ ಕಾರ್ಯ ಮಾಡಿದ. ೩ನೇ ಮಹಮ್ಮದಶಹ ರಾಜ್ಯದ ಎಲ್ಲ ವಿಷಯಗಳ ಬಗೆಗೆ ಗವಾನನನ್ನೇ ಕೇಳಿ ಅವನ ಸಲಹೆಯಿಂದ ರಾಜ್ಯವನ್ನು ನಿರ್ವಹಿಸುತ್ತಿದ್ದ.

ಬಹಮನಿ ರಾಜ್ಯದ ಸುಗಮ ಆಡಳಿತದ ವ್ಯವಸ್ಥೆಗಾಗಿ ಗವಾನ ರಾಜ್ಯವನ್ನು ವಿಸ್ತಾರವಾಗಿ ಎಂಟು ವಿಭಾಗಗಳಲ್ಲಿ ವಿಂಗಡಿಸಿದ್ದನಷ್ಟೇ. ಈ ರೀತಿ ವಿಸ್ತಾರವಾದ ವ್ಯವಸ್ಥೆ ರಾಜ್ಯದ ಹಿತಕ್ಕೆ ಧಕ್ಕೆ ತರಲಿಲ್ಲ. ಪ್ರತಿಯೊಂದು ವಿಭಾಗದಲ್ಲಿ ಒಂದೊಂದು ಸೈನಿಕ ಕೋಟೆಯನ್ನು ನಿರ್ಮಿಸಿದ. ಅಲ್ಲಿ ಒಬ್ಬ ನಿಷ್ಠಾವಂತ ಸರದಾರನನ್ನು ಬಹಮನಿ ರಾಜ್ಯದ ವಿಭಾಗದ ಅಧಿಕಾರಿಯನ್ನಾಗಿ ನಿಯಮಿಸಿದ. ವಿಭಾಗದ ಅಧಿಕಾರಿ ಸಂಪೂರ್ಣ ಸ್ವತಂತ್ರನಾಗಿರಲಿಲ್ಲ.

ವಿಭಾಗದ ಅಧಿಕಾರಿಗೆ ಹಾಗೂ ಸೈನಿಕರಿಗೆ ಕೇಂದ್ರದ ಬೊಕ್ಕಸದಿಂದಲೇ ಹಣ ನೀಡಲಾಗುತ್ತಿತ್ತು. ಬಹಮನಿ ರಾಜ್ಯದ ಕೇಂದ್ರದ ಆದೇಶದಂತೆಯೇ ವಿಭಾಗದ ಅಧಿಕಾರಿ ಕಾರ್ಯ ನಿರ್ವಹಿಸುತ್ತಿದ್ದ. ವಿಭಾಗದ ವ್ಯವಸ್ಥೆಗೆ ಬೇಕಾಗುವ ಸೈನಿಕ ಸಿಬ್ಬಂದಿಯು ಕೇಂದ್ರದ ಕಚೇರಿಯಿಂದಲೇ ನೇಮಿಸಲ್ಪಡುತ್ತಿತ್ತು. ಮುಖ್ಯವಾಗಿ ಮಹಮೂದ ಗವಾನ ಸರಂಜಾಮು ಪದ್ಧತಿಯನ್ನು ನಿರ್ಮೂಲ ಮಾಡಿದ.

ಮಹಮೂದ ಗವಾನ ಆರ್ಥಿಕ ವಿಷಯಗಳಲ್ಲಿಯೂ ಸಾಕಷ್ಟು ಅನುಭವ ಹೊಂದಿದ್ದ ಹಾಗೂ ಸಾಕಷ್ಟು ಸುಧಾರಣೆಗಳನ್ನು ಮಾಡಿದ. ಬಹಮನಿರಾಜ್ಯದ ಸೀಮೆಯನ್ನು ಸರಿಯಾಗಿ ಅಳೆಯಿಸಿ, ಹಳ್ಳಿಗಳ, ಫಲವತ್ತಾದ, ಹೊಲ ಗದ್ದೆಗಳ ಸರಿಯಾದ ಮಾಹಿತಿಯನ್ನು ಕಲೆಹಾಕಿದ. ರಾಜ್ಯದ ಜನರ ಸಾಂಪತ್ತಿಕ ಸ್ಥಿತಿಯನ್ನು ಲಕ್ಷ್ಯದಲ್ಲಿರಿಸಿಕೊಂಡು ಕರಗಳನ್ನು ನಿಶ್ಚಿತಗೊಳಿಸಿದ. ರಾಜ್ಯದ ಜನರಿಗೆ ಯಾವ ಬಗೆಯ ಆರ್ಥಿಕ ತೊಂದರೆಗಳನ್ನು ಕೊಡಲಿಲ್ಲ. ನ್ಯಾಯವಾದದ್ದಷ್ಟನ್ನೇ ಅವರಿಂದ ಗವಾನ ವಸೂಲ ಮಾಡುತ್ತಿದ್ದ. ಇದೇ ರೀತಿಯಾಗಿ, ನ್ಯಾಯದಾನದ ವಿಷಯದಲ್ಲಿಯೂ ಗವಾನ ನ್ಯಾಯ ಹಾಗೂ ಧರ್ಮದ ಪಕ್ಷಪಾತಿಯಾಗಿ ವರ್ತಿಸಿದ. ಆದರೆ ಕ್ರಾಂತಿಕಾರರಿಗೂ ರಾಜ್ಯದ ಶಾಂತಿ ಸುವ್ಯವಸ್ಥೆಯನ್ನು ಕದಡಿದವರಿಗೂ ಉಗ್ರ ಶಿಕ್ಷೆಯೇ ಅವನ ಅಭಿಪ್ರಾಯವಾಗಿತ್ತು. ರಾಜ್ಯದ ನ್ಯಾಯಾಂಗ ಶಾಖೆಯನ್ನು ನವೀನ ರೀತಿಯಲ್ಲಿ ಸಜ್ಜುಗೊಳಿಸಿದ. ರಾಜ್ಯದಲ್ಲಿ ಧರ್ಮ, ನೀತಿ, ಶಾಂತಿ ನೆಲೆಯೂರಬೇಕೆಂಬುದೇ ಗವಾನನ ಮನೀಷೆಯಾಗಿತ್ತು.

ಗವಾನ ತನ್ನ ರಾಜ್ಯದ ನೆರೆ–ಹೊರೆ ರಾಜರೊಡನೆ ಮಧುರ ಬಾಂಧವ್ಯದ ಹೊಸ ಹಾದಿಯನ್ನೇ ಹಾಕಿದ. ನೆರೆ–ಹೊರೆಯುವ ರೊಡನೆ ದ್ವೇಷಾಸೂಯೆಗಳನ್ನು ಮರೆತು, ಆಕ್ರಮಣ ಧೋರಣೆ ತೊರೆದು ಬಾಳಬೇಕೆಂಬುದು ಅವನ ಉದ್ದೇಶ. ಆದರೆ ಬಹಮನಿ ರಾಜ್ಯದ ಹಾಗೂ ವಿಜಯನಗರದ ಆಳರಸರೊಡನೆ ಮೇಲಿಂದ ಮೇಲೆ ಕದನಗಳು ನಡೆಯುತ್ತಿದ್ದವು. ಆಂತರಿಕ ಕಲಹಗಳನ್ನು ನಿರ್ಮೂಲಗೊಳಿಸುವಲ್ಲಿ ಗವಾನ ಸುಲ್ತಾನನ ನಿಜವಾದ ಗೆಳೆಯ ನಂತೆ ಸೇವೆ ಸಲ್ಲಿಸಿದ. ಅಂತೆಯೇ ಗವಾನ ಬಹಮನಿ ರಾಜ್ಯದ ಇತಿಹಾಸದಲ್ಲಿ ದಕ್ಷ, ನ್ಯಾಯಪಕ್ಷಪಾತಿ ಆಡಳಿತಗಾರ ನೆಂದು ಪ್ರಸಿದ್ಧಿ ಪಡೆದಿದ್ದಾನೆ.

## ಮಹಮೂದ ಗವಾನ ವಿದ್ಯಾಲಯ

ಮಹಮೂದ ಗವಾನ ಶಿಕ್ಷಣ ರಂಗದಲ್ಲಿಯೂ ಸಹ ಪ್ರತಿಭಾ ಸಂಪನ್ನನಾಗಿದ್ದ. ಆತನ ಶಿಕ್ಷಣಪ್ರೇಮದ ಸಂಕೇತವಾಗಿ ಬೀದರಿ ನಲ್ಲಿ ಆತನೇ ಕಟ್ಟಿಸಿದ ವಿದ್ಯಾಲಯ ಇಂದಿಗೂ ಜೀವಂತ ಸಾಕ್ಷಿ ಯಾಗಿ ನಿಂತಿದೆ.

ಮಹಮೂದ ಗವಾನನ ವಿದ್ಯಾಲಯ ಅವನ ಬದುಕಿನ ಹೆಮ್ಮೆಯ ಸಾಧನೆಯೆಂದೇ ಹೇಳಬೇಕು. ಅದೂ ಅಲ್ಲದೆ ಈ ವಿದ್ಯಾಲಯ ಬಹಮನಿ ರಾಜ್ಯದ ಕಟ್ಟಡಗಳಲ್ಲಿಯೇ ಅನುಪಮ ವಾದದ್ದೆಂದು ಹೇಳಬಹುದು. ಅನೇಕ ವಿದೇಶಿ ಲೇಖಕರು ಗವಾನನ ವಿದ್ಯಾಲಯವನ್ನು ಸಂದರ್ಶಿಸಿ ಬಾಯ್ತುಂಬ ಹೊಗಳಿ ದ್ದಾರೆ. ದಕ್ಷಿಣ ಭಾರತದಲ್ಲಿಯೇ ಇಂಥ ಇನ್ನೊಂದು ಕಟ್ಟಡ ಇರಲಿಲ್ಲವೆಂದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ.

ಸರ್ ರಿಚರ್ಡ ಟೆಂಪಲ್ ಈ ವಿದ್ಯಾಲಯದ ಬಗೆಗೆ ಹೀಗೆ ಉದ್ಗರಿಸಿದ್ದಾನೆ.

"Among the old buildings of India, the School building is of its type and very beautiful." ಅಲ್ಲದೆ ಈ ಕೆಳಗಿನ ವಾಕ್ಯದಲ್ಲಿ ಗವಾನನ ವಿದ್ಯಾಲಯದ ಘನತೆಯನ್ನು ನಾವು ಕಾಣಬಹುದಾಗಿದೆ.

"This exalted School with a high basement, has been built as the place of adoration for the pure minded. Look at the signs of its divine acceptance, that its chronogram in the Quranic verse "Our Lord accept it from us."

ಕ್ರಿ. ಶ. ೧೪೭೨ ರಲ್ಲಿ ಈ ವಿದ್ಯಾಲಯ ನಿರ್ಮಾಣವಾಯಿತು. ಮಹಮೂದ ಗವಾನನು ಈ ವಿದ್ಯಾಲಯವನ್ನು ಕಟ್ಟಲು ಪರ್ಶಿಯಾ ಹಾಗೂ ಇನ್ನಿತರ ದೇಶಗಳಿಂದ ಶಿಲ್ಪ ಕಲಾಕಾರರನ್ನೂ ಹಾಗೂ ತಾಂತ್ರಿಕ ತಜ್ಞರನ್ನೂ ಕರೆಸಿದನೆಂದು ನಂಬಲಾಗಿದೆ. ಈ ಸಂಗತಿಯನ್ನು ಪುಷ್ಟೀಕರಿಸಲು ಐತಿಹಾಸಿಕ ದಾಖಲೆಗಳ ಬೆಂಬಲವೂ ದೊರೆಯುತ್ತದೆ. ಪಶ್ಚಿಮ ಆಫ್ರಿಕಾ, ರಾಬಾತ, ಸಮರಕಂದ ಹಾಗೂ ಖೋರಾಸಾನಗಳಲ್ಲಿ ಕಟ್ಟಿದ ಪ್ರಸಿದ್ಧ ವಿದ್ಯಾಲಯಗಳು ಇದೇ ಮಾದರಿಯಲ್ಲಿ ನಿರ್ಮಾಣವಾಗಿವೆ ಎಂದು ಅನೇಕ ಲೇಖಕರು ಅಭಿಪ್ರಾಯಪಟ್ಟಿದ್ದಾರೆ. ಮುಸ್ಲಿಮ್ ಇತಿಹಾಸಕಾರ ಫಿರಿಸ್ತನೂ ಸಹ ಮೇಲಿನ ಅಭಿಪ್ರಾಯವನ್ನು ಒಪ್ಪಿ



ಮಹಮೂದ ಗವಾನ ವಿದ್ಯಾಲಯ
ಬೀದರ

ಕೊಂಡಿದ್ದಾನೆ. ಫಿರಿಸ್ತನ ಪ್ರಕಾರ, ಮಹಮೂದ ಗವಾನ ಜಗತ್ತಿನ ಆ ಕಾಲದ ವಿದ್ಯಾಲಯಗಳೊಡನೆ ಹಾಗೂ ಪ್ರಸಿದ್ಧ ಮೇಧಾವಿಗಳೊಡನೆ ತನ್ನ ಸಂಪರ್ಕವನ್ನಿರಿಸಿಕೊಂಡಿದ್ದ. ಅದೂ ಅಲ್ಲದೆ ಜಗತ್ತಿನ ಪ್ರಸಿದ್ಧ ವಿದ್ಯಾಲಯಗಳ ಮಾದರಿಯಲ್ಲಿಯೇ ಬೀದರಿನಲ್ಲಿ ವಿದ್ಯಾಲಯವನ್ನು ನಿರ್ಮಾಣ ಮಾಡಿದ.

ಗವಾನನ ವಿದ್ಯಾಲಯವೆಂದರೆ ಮಹಾ ಮೇಧಾವಿಗಳ ಹಾಗೂ ವಿಜ್ಞಾನಿಗಳ ಸಂಗಮ. ತತ್ತ್ವಶಾಸ್ತ್ರ, ಗಣಿತ ಶಾಸ್ತ್ರ, ವಿಜ್ಞಾನ ಮುಂತಾದವುಗಳ ಮೇಧಾವಿಗಳು ಇಲ್ಲಿ ಸಮಾವೇಶಗೊಂಡಿದ್ದರು. ಗವಾನನೂ ಸಹ ತನ್ನ ವಿಶ್ರಾಂತಿಯ ಹಾಗೂ ಬಿಡುವಿನ ವೇಳೆಯನ್ನು ಇಲ್ಲಿಯೇ ಕಳೆಯುತ್ತಿದ್ದ, ಮಹಮೂದ ಗವಾನ ಸ್ವತಃ ಗಣಿತ ಹಾಗೂ ತತ್ತ್ವಶಾಸ್ತ್ರಗಳಲ್ಲಿ ಮೇಧಾವಿಯಾಗಿದ್ದ, ಈ ವಿದ್ಯಾಲಯದಲ್ಲಿ ಸುಮಾರು ೩೦೦೦ ಕೈಬರೆಹದ ಪ್ರತಿಗಳಿದ್ದವೆಂದು ನಂಬಲಾಗಿದೆ. ಆದರೆ ಕಾಲಚಕ್ರದ ವಶಕ್ಕೆ ಸಿಲುಕಿ ಅವೆಲ್ಲ ಈಗ ನಾಶವಾಗಿರಬಹುದು. ಉಳಿದಿದ್ದರೂ ಓದಲು ಬಾರದಷ್ಟು ನಾಶವಾಗಿವೆ.

ಗವಾನನ ವಿದ್ಯಾಲಯದ ಮುಖ್ಯ ಅಂಶವೆಂದರೆ, ಇಲ್ಲಿ ವಿದ್ಯಾರ್ಥಿಗಳಿಗೆ ಪುಕ್ಕಟೆ ವಸತಿ, ಊಟ, ವಿದ್ಯೆ ಹಾಗೂ ಉಳಿದ ಸೌಕರ್ಯಗಳನ್ನು ಒದಗಿಸಲಾಗುತ್ತಿತ್ತು. ವಿದ್ಯಾರ್ಥಿಗಳು ಯಾವ ಬಗೆಯ ಶಿಕ್ಷಣ ಶುಲ್ಕವನ್ನೂ ಕೊಡುತ್ತಿರಲಿಲ್ಲ. ಅಂತೆಯೇ ಮಹಮೂದ ಗವಾನನ ಈ ವಿದ್ಯಾಲಯ ಆದರ್ಶ ಶಿಕ್ಷಣಸಂಸ್ಥೆಯಾಗಿ ಪ್ರಸಿದ್ಧಿ ಪಡೆದಿತ್ತು,

ಇನ್ನೊಂದು ಅಂಶವೆಂದರೆ, ಈ ವಿದ್ಯಾಲಯದಲ್ಲಿ ಪ್ರಾಥ್ಯಾ

ಪಕರೂ ಸಹ ಇರುತ್ತಿದ್ದರು. ಅವರಿಗೆ ವಸತಿ ಹಾಗೂ ಊಟದ ಸೌಕರ್ಯಗಳನ್ನು ಒದಗಿಸಲಾಗಿತ್ತು. ಇದಲ್ಲದೆ ಇಲ್ಲಿ ಧಾರ್ಮಿಕ ವ್ಯಕ್ತಿಗಳೂ ಹಾಗೂ ಸಾಧು–ಸತ್ಪುರುಷರೂ ಇರಬಹುದಾಗಿತ್ತು. ಪ್ರಾಧ್ಯಾಪಕರಿಗೆ, ಧಾರ್ಮಿಕ ಸಾಧು–ಸತ್ಪುರುಷರಿಗೆ ಹಾಗೂ ವಿದ್ಯಾರ್ಥಿಗಳಿಗೆ ಬೇಕಾಗುವ ವಸತಿ–ಸೌಕರ್ಯಗಳನ್ನು ಬೇರೆ ಬೇರೆಯಾಗಿ ಮಾಡಲಾಗಿತ್ತು. ಇಂಥ ವ್ಯವಸ್ಥೆಯನ್ನು ನಾವು ಈಗಲೂ ಅಳಿದುಳಿದ ಗವಾನ ವಿದ್ಯಾಲಯದಲ್ಲಿ ನೋಡಬಹುದಾಗಿದೆ. ಇದೇ ವಿದ್ಯಾಲಯದಲ್ಲಿ ಒಂದು ಮಸೀದೆ ಹಾಗೂ ಒಂದು ಗ್ರಂಥಾಲಯ ನಿರ್ಮಾಣವಾಗಿದ್ದವೆಂದು ನಂಬಲಾಗಿದೆ. ಈಗಲೂ ಮಸೀದೆ ನಮಗೆ ಕಾಣಸಿಗುತ್ತದೆ. ಆದರೆ ಗ್ರಂಥಾಲಯದ ಕುರುಹು ಉಳಿದಿಲ್ಲ.

ಇನ್ನು ವಿದ್ಯಾಲಯದ ಕಟ್ಟಡ ಹಾಗೂ ಕಲಾಕುಶಲತೆಯ ಬಗೆಗೆ ಒಂದೆರಡು ಮಾತು. ಗವಾನನ ವಿದ್ಯಾಲಯ ಸವಿಸ್ತಾರವಾದ ಹಾಗೂ ಗಟ್ಟಿಮುಟ್ಟಾದ ತಳಪಾಯದ ಮೇಲೆ ಸುಂದರವಾಗಿ ಕಟ್ಟಲ್ಪಟ್ಟಿದೆ. ಮೂರು ಅಂತಸ್ತುಗಳಲ್ಲಿ ಈ ವಿದ್ಯಾಲಯ ನಿರ್ಮಾಣವಾಗಿದೆ. ಈ ಕಟ್ಟಡಕ್ಕೆ ಎರಡು ಎತ್ತರದ ಸ್ತಂಭಗಳಿದ್ದವೆಂದು ಐತಿಹಾಸಿಕ ದಾಖಲೆ ಇದೆ. ಆದರೆ ಈಗ ಸದ್ಯಕ್ಕೆ ಕಾಣಸಿಗುವದು ಒಂದೇ ಸ್ತಂಭ. ವಿದ್ಯಾಲಯದ ಹೊರಗಿನ ಗೋಡೆಯು ಪೂರ್ವ–ಪಶ್ಚಿಮವಾಗಿ ೨೪೧' ಗಳ ವರೆಗೆ ಉದ್ದವಾಗಿದೆ. ಉತ್ತರ ದಕ್ಷಿಣವಾಗಿ ೨೨೦' ಗಳ ವರೆಗೆ ಅಗಲವಾಗಿದೆ. ಮುಗಿಲನ್ನೇ ಚುಂಬಿಸುವಂತಿರುವ ಈ ವಿದ್ಯಾಲಯದ ಸ್ತಂಭ ತಳಪಾಯದಿಂದ ೧೩೧' ಎತ್ತರವಾಗಿದೆ. ಒಳಗಿನ ಆವರಣ ಪೂರ್ವ–ಪಶ್ಚಿಮ

ವಾಗಿ ೭೫' ಗಳ ವರೆಗೆ ಉದ್ದವಾಗಿದೆ; ಹಾಗೂ ಉತ್ತರ-ದಕ್ಷಿಣ ವಾಗಿ ೫೫' ಗಳ ವರೆಗೆ ಅಗಲವಾಗಿದೆ. ಆವರಣದ ಎತ್ತರ ೪೫'. ಈ ವಿದ್ಯಾಲಯದಲ್ಲಿ ಪ್ರಾಧ್ಯಾಪಕರಿಗೆ, ವಿದ್ಯಾರ್ಥಿಗಳಿಗೆ ಧಾರ್ಮಿಕ ಪುರುಷರಿಗೆ ವಸತಿ ಸೌಕರ್ಯವಿತ್ತು. ಇದೂ ಅಲ್ಲದೆ ೩೦೦೦ ಕೈಬರೆಹದ ಪ್ರತಿಗಳಿದ್ದ ಒಂದು ಗ್ರಂಥಾಲಯ ಹಾಗೂ ಮಸೀದೆ ಇವುಗಳೂ ಈ ವಿದ್ಯಾಲಯದಲ್ಲಿಯೇ ನಿರ್ಮಾಣವಾಗಿದ್ದವು. ಮಸೀದೆ ಈಗಲೂ ನಮಗೆ ಕಾಣಸಿಗುತ್ತದೆ.

ಈ ವಿದ್ಯಾಲಯದ ಕಲಾಕುಶಲತೆಯ ಬಗೆಗೆ ಹೇಳಬೇಕಾದರೆ, ಗವಾನ ವಿದ್ಯಾಲಯ ನಿಜವಾಗಿಯೂ ನಯನ ಮನೋಹರವಾಗಿದೆ. ವಿದ್ಯಾಲಯದ ಮುಂಭಾಗದ ಗೋಡೆಯ ಮೇಲೆಲ್ಲ ಚೀನಿ ಮಣ್ಣಿನ ಪ್ಲೇಟಿನಲ್ಲಿ ಕೆತ್ತಲಾದ ಕಲಾಕುಸುರಿನ ಆಕೃತಿಗಳು ಈ ವಿದ್ಯಾಲಯದ ಸೌಂದರ್ಯವನ್ನು ಇನ್ನಿಷ್ಟು ಹೆಚ್ಚಿಸಿವೆ. ವಿದ್ಯಾಲಯದ ಎತ್ತರವಾದ ಸ್ತಂಭದ ಮೇಲೆಯೂ ಸಹ ಬಣ್ಣ-ಬಣ್ಣದ ಕಲಾಕುಸುರಿನ ಆಕೃತಿಗಳು ಕೆತ್ತಲ್ಪಟ್ಟಿವೆ. ಆ ಬಣ್ಣ, ಕಲೆ, ಗಾಳಿ-ಮಳೆಗಳ ಆಘಾತಗಳನ್ನು ಲೆಕ್ಕಿಸದೆ ಇಂದಿಗೂ ಹೊಸದಾಗಿ ನಿರ್ಮಾಣಗೊಂಡಂತಾಗಿವೆ. ತಿಳಿಹಸಿರು, ಹಳದಿ ಹಾಗೂ ಬಿಳಿ ಬಣ್ಣಗಳಲ್ಲಿ ಕಲಾಕೃತಿಗಳನ್ನು ಕೆತ್ತಿದ್ದಾರೆ. ಸುಮಾರು ೫೦೦ ವರುಷಗಳು ಆಗುತ್ತ ಬಂದಿದ್ದರೂ ಈ ವಿದ್ಯಾಲಯದ ಕಲೆಯ ಚೆಲುವು ಮಾತ್ರ ಇನ್ನೂ ಕುಂದಿ ಹೋಗಿಲ್ಲ.

ಪವಿತ್ರ "ಕುರಾನ"ದಿಂದ ಆಯ್ದುಕೊಂಡ ಕೆಲ ಉಕ್ತಿಗಳೂ ವಿದ್ಯಾಲಯದ ಗೋಡೆಯ ಮೇಲೆ ಇಂದಿಗೂ ಇವೆ. ದುರ್ದೈವದಿಂದ ಗವಾನ ವಿದ್ಯಾಲಯ ಕ್ರಿ. ಶ. ೧೬೯೬ ರಲ್ಲಿ ಸಿಡಿಲಿನ ಆಘಾ-

ತಕ್ಕೆ ಸಿಲುಕಿ ಅದರ ಅರ್ಧ ಭಾಗ ನೆಲಸಮವಾಗಿದೆ. ಒಂದು ಎತ್ತರವಾದ ಸ್ತಂಭವೂ ಕಣ್ಮರೆಯಾಗಿದೆ. ಆದರೆ ಆಳಿದುಳಿದ ಅರ್ಧ ಭಾಗ ಇಂದಿಗೂ ನಮಗೆ ಅದರ ಐತಿಹಾಸಿಕ ಶ್ರೀಮಂತಿಕೆಯನ್ನು ಹಾಗೂ ಗವಾನನ ಶಿಕ್ಷಣ ಪ್ರೇಮವನ್ನು ಸೂಚಿಸುತ್ತದೆ. ಅಷ್ಟೇ ಅಲ್ಲದೆ, ಬಹಮನಿ ರಾಜ್ಯದ ಹೆಮ್ಮೆಯ ಸಂಕೇತವಾಗಿಯೂ ನಿಂತಿದೆ.

## ರಶಿಯದ ಪ್ರವಾಸಿ ನಿಕಿಟಿನ್ನನ ವರ್ಣನೆ :

ಮಹಮೂದ ಗವಾನ ಪ್ರಧಾನಮಂತ್ರಿಯಾಗಿದ್ದ ಕಾಲದಲ್ಲಿ ಸುಮಾರು ೧೪೭೦ ರ ವೇಳೆಗೆ ರಶಿಯದ ಪ್ರವಾಸಿ ನಿಕಿಟಿನ್ನನು ಭಾರತಕ್ಕೆ ಭೇಟಿ ನೀಡಿದ್ದ; ಹಾಗೂ ಬಹಮನಿ ರಾಜ್ಯದ ರಾಜಧಾನಿಯಾದ ಬೀದರಕ್ಕೂ ಬಂದಿದ್ದ. ನಿಕಿಟಿನ್ನನು ಬೀದರದ ಘನತೆಯ ಬಗೆಗೆ ತನ್ನ ವರ್ಣನಾಮಯ ಅಭಿಪ್ರಾಯವನ್ನು ನೀಡಿದ್ದಾನೆ. ಅವನ ಅಭಿಪ್ರಾಯದ ಮೇರೆಗೆ ಬೀದರದ ರಾಜ್ಯ ಒಳ್ಳೇ ಊರ್ಜಿತಾವಸ್ಥೆಯಲ್ಲಿತ್ತು. ಎಲ್ಲಿ ನೋಡಿದಲ್ಲಿ ಹಸಿರು ಹೊಲ ಗದ್ದೆಗಳು, ತೋಟಗಳು ಕಂಗೊಳಿಸುತ್ತಿದ್ದವು. ಬೀದರಿನ ಕೋಟೆ ಭದ್ರವಾಗಿತ್ತು. ಬೀದರಿನ ದೊರೆಯ ಅರಮನೆ ಅತಿ ಸುಂದರವಾಗಿತ್ತು. ಅದೇ ರೀತಿ ರಾಜ್ಯದ ಪ್ರಧಾನ ಮಂತ್ರಿ ಗವಾನ ಬಲಾಢ್ಯನೂ, ವಿಚಾರ ಸಂಪನ್ನನೂ, ಗಣಿತ ಶಾಸ್ತ್ರದಲ್ಲಿ ನಿಪುಣನೂ, ಖಗೋಳ ಶಾಸ್ತ್ರದಲ್ಲಿ ಜ್ಞಾನಿಯೂ ಆಗಿದ್ದನೆಂದು ನಿಕಿಟಿನ್ನನು ವರ್ಣಿಸಿದ್ದಾನೆ. ಮಹಮೂದ ಗವಾನನು ಕಟ್ಟಿಸಿದ ವಿದ್ಯಾಲಯ ಎಲ್ಲ ವಿಷಯಗಳ ಹಾಗೂ ಧಾರ್ಮಿಕ ಕೇಂದ್ರ

ವಾಗಿತ್ತು. ಈ ರೀತಿಯಾಗಿ ನಿಕಟಿನ್ನನು ನಮಗೆ ಬಹಮನಿ ರಾಜ್ಯದ ವರ್ಣನೆಯನ್ನು ನೀಡಿದ್ದಾನೆ. ಈ ವಿದೇಶಿ ಪ್ರವಾಸಿಯ ವರ್ಣನೆ ಗವಾನನ ಶ್ರೇಷ್ಠ ವ್ಯಕ್ತಿತ್ವದ ನಿದರ್ಶನವೇ ಆಗಿದೆ.

## ಮಹಮೂದ ಗವಾನನ ಕೊಲೆ

ಮಹಮೂದ ಗವಾನನ ಕೊಲೆಯಾಯಿತೆಂದು ಹೇಳಿದರೆ ನಂಬುವದು ಸಾಧ್ಯವಾಗಲಿಕ್ಕಿಲ್ಲ. ಆದರೆ ದುರ್ದೈವದಿಂದ ಗವಾನನ ಕೊಲೆ ನಡೆದ ಸಂಗತಿ ಬಹಮನಿ ರಾಜ್ಯದ ಇತಿಹಾಸದಲ್ಲಿ ಕಳಂಕ ಪ್ರಾಯವಾದ ಘಟನೆಯಾಗಿದೆ.

ಮಹಮೂದ ಗವಾನ, ಬಹಮನಿ ರಾಜ್ಯದ ಪ್ರಧಾನ ಮಂತ್ರಿಯಾಗಿ, ದಂಡನಾಯಕನಾಗಿ, ದೊರೆಗಳ ನಿಷ್ಠಾವಂತ ಸ್ನೇಹಿತನಾಗಿ ಸೇವೆ ಸಲ್ಲಿಸಿ ರಾಜ್ಯದ ಪ್ರತಿಷ್ಠಿತ ವ್ಯಕ್ತಿಯಾಗಿ ಮೆರೆದದ್ದು ವಿದಿತವಷ್ಟೆ ! ಆದರೆ ಬೀದರಿನ ಕೆಲವು ಪ್ರತಿಷ್ಠಿತ ವ್ಯಕ್ತಿಗಳು ಗವಾನನ ಪ್ರತಿಭೆಯನ್ನು ಸಹಿಸದಾದರು. ಮಹಮೂದ ಗವಾನನನ್ನು ಹೇಗಾದರೂ ಮಾಡಿ ರಾಜ್ಯದಿಂದ ಓಡಿಸಬೇಕೆಂಬುದೇ ಅವರ ಮನೀಷೆಯಾಗಿತ್ತು. ಅವನ ಕೊಲೆ ಮಾಡಲೂ ಅವರು ಯೋಚನೆ ಮಾಡಿದರು. ಗವಾನನ ಮೇಲೆ ದೇಶದ್ರೋಹದ ಆರೋಪ ಹೊರಿಸಿ ದೊರೆಯಿಂದಲೇ ಅವನ ಅಂತ್ಯವಾಗ ಬೇಕೆಂಬುದು ಅವರ ಇಚ್ಛೆಯಾಗಿತ್ತು. ಇಂಥ ಒಂದು ಸಂದರ್ಭ ಕ್ಕಾಗಿ ಗವಾನನ ವೈರಿಗಳು ಕಾಯ್ದುಕುಳಿತಿದ್ದರೆಂದು ಹೇಳಿದರೆ ಅತಿ ಶಯೋಕ್ತಿಯಾಗಲಿಕ್ಕಿಲ್ಲ.

ಗವಾನನ ವೈರಿಗಳು ಒಂದು ದಿನ ಅವನ ಸೇವಕನಿಗೆ

ಮಾದಕ ಪೇಯ ಕುಡಿಸಿ ಅವನಿಂದ ಹಾಳೆಯ ಮೇಲೆ ಪ್ರಧಾನ ಮಂತ್ರಿಯ ಸೀಲನ್ನು ತೆಗೆದುಕೊಂಡರು. ಅಲ್ಲದೆ ಪ್ರಧಾನ ಮಂತ್ರಿಯ ಸೀಲು ಇದ್ದ ಆ ಹಾಳೆಯಲ್ಲಿ ತಮಗೆ ಹೋದಂತೆ ಒಂದು ಪತ್ರ ಬರೆದರು. ಆ ಪತ್ರವನ್ನು ಗವಾನನಿಂದಲೇ ಬರೆದಿವೆಯೋ ಎಂಬಂತೆ ತಯಾರಿಸಿದರು. ಆ ಪತ್ರದಲ್ಲಿಯ ಸಾರಾಂಶ ವೆಂದರೆ, ಮಹಮೂದ ಗವಾನನು ಓರಿಸಾದ ದೊರೆಯೊಡನೆ ಬಹಮನಿ ದೊರೆಯ ವಿರುದ್ಧ ಒಳಸಂಚು ಮಾಡಿಕೊಂಡದ್ದು ಹಾಗೂ ಬಹಮನಿ ರಾಜ್ಯದ ಸುಲ್ತಾನನನ್ನು ಕೊಲೆ ಮಾಡಿ ಇಡಿಯ ರಾಜ್ಯವನ್ನೇ ಕಬಳಿಸುವ ಯೋಜನೆ ಹಾಗೂ ಓರಿಸಾದ ದೊರೆಗೆ ಅರ್ಧ ರಾಜ್ಯವನ್ನು ಕೊಡುವುದು ಇವೇ ಮುಂತಾದ ಕುಹಕ ಯೋಜನೆಗಳಾಗಿದ್ದವು. ಈ ರೀತಿಯಾಗಿ ತಯಾರಿಸಲಾದ ಖೊಟ್ಟಿ ಪತ್ರವನ್ನು ಬಹಮನಿ ರಾಜ್ಯದ ಸುಲ್ತಾನ ೩ ನೇ ಮಹಮ್ಮದಶಹನಿಗೆ ಮುಟ್ಟಿಸಿದರು. ಮಿಥ್ಯಾರೋಪವಿದ್ದ ಪತ್ರ ದೊರೆಯ ಕೈಸೇರಿದ ಮೇಲೆ ಬಹಮನಿ ದೊರೆ ನಿಜವಾಗಿಯೂ ಗವಾನನನ್ನು ದ್ವೇಷಿಸಲು ಪ್ರಾರಂಭಿಸಿದ. ಆ ಪತ್ರ ಹಾಗೂ ಒಳಸಂಚು ಎಲ್ಲವೂ ನಿಜವೆಂದು ನಂಬಿದ. ತಕ್ಷಣವೇ ಮಹಮೂದ ಗವಾನನನ್ನು ತನ್ನ ಎದುರಿಗೆ ಬಂಧಿಸಿ ತರಲು ಅಪ್ಪಣೆ ನೀಡಿದ. ಇಷ್ಟೆಲ್ಲ ದುರಂತ ನಡೆದುಹೋಗಿದ್ದರೂ ಗವಾನನಿಗೆ ಅದರ ಪರಿವೆಯೇ ಇರಲಿಲ್ಲ. ದೊರೆಯ ಸೇವಕರು ಬಂದು ಕರೆದಾಗ ಗವಾನನು ಸುಲ್ತಾನನ ಸಂದರ್ಶನಕ್ಕೆ ಧಾವಿಸಿದ. ೩ನೇ ಮಹಮೂದಶಹನು ಆಗ ಬಹಳವಾಗಿ ಮಾದಕ ಪೇಯವನ್ನು ಕುಡಿದಿದ್ದ. ಗವಾನನ ಬಗೆಗೆ ಅವನಿಗಿದ್ದ ಎಲ್ಲ ಒಳ್ಳೇ ಅಭಿಪ್ರಾಯ

ಆಗಲೇ ಮಾಯವಾಗಿತ್ತು. ತನ್ನ ದರ್ಬಾರಿನಲ್ಲಿ ಗವಾನನು ಬಂದುದನ್ನು ಗಮನಿಸಿ ದೊರೆಯು ಅವನಿಗೆ ಒಂದು ಪ್ರಶ್ನೆಯನ್ನು ಕೇಳಿದ. ಆ ಪ್ರಶ್ನೆ ಬೇರೇನೂ ಅಲ್ಲದೆ ದೇಶದ್ರೋಹಿಗೆ ಯಾವ ಬಗೆಯ ಶಿಕ್ಷೆ ಕೊಡಬೇಕು ಎಂಬುದೇ ಆಗಿತ್ತು. ಮಹಮೂದ ಗವಾನನಿಗೆ ಪ್ರಶ್ನೆಯ ಗರ್ಭಿತ ಅರ್ಥವಾಗದಿದ್ದರೂ ಕೂಡಲೇ ಉತ್ತರ ನೀಡಿದ. ದೇಶದ್ರೋಹಿಗೆ ಮರಣದಂಡನೆಯೇ ಯೋಗ್ಯ ಹಾಗೂ ನ್ಯಾಯವಾದ ಶಿಕ್ಷೆ ಎಂದು ಗವಾನ ಹೇಳಿದ. ನಂತರ ೩ನೇ ಮಹಮ್ಮದಶಹನು ಗವಾನನಿಗೆ ಆ ಪತ್ರವನ್ನು ಕೊಟ್ಟ. ಮಹಮೂದ ಗವಾನನಿಗೆ ಏನೂ ಅರ್ಥವಾಗಲಿಲ್ಲ. ಆದರೆ ಆ ಪತ್ರದ ಮೇಲೆ ಪ್ರಧಾನ ಮಂತ್ರಿಯ ಸೀಲು ಇದ್ದುದು ನಿಜವೆಂದು ಒಪ್ಪಿಕೊಂಡ. ಆದರೆ ಅದು ಹೇಗೆ ಈ ಪತ್ರದಲ್ಲಿ ಬಂದಿದೆ ಎಂಬುದೇ ಅವನಿಗೆ ಹೊಳೆಯಲಿಲ್ಲ. ಗವಾನನು ದೊರೆಗೆ ತಾನು ನಿರಪರಾಧಿ ಹಾಗೂ ಪತ್ರಕ್ಕೆ ತಾನು ಸೀಲು ಹಾಕಲಿಲ್ಲ ಎಂದು ಹೇಳಿದ. ಆದರೆ ೩ನೇ ಮಹಮ್ಮದಶಹನು ಗವಾನನ ಅಭಿಪ್ರಾಯವನ್ನು ಕೇಳುವಷ್ಟು ತಾಳಿಕೊಳ್ಳಲಿಲ್ಲ ಹಾಗೂ ದೂರ ದೃಷ್ಟಿಯಿಂದ ವಿಚಾರ ಮಾಡುವ ಸ್ಥಿತಿಯಲ್ಲಿಯೂ ಅವನಿರಲಿಲ್ಲ. ಗವಾನನ ದ್ವೇಷಿಗಳ ಕಪಟ ಕಾರಸ್ಥಾನವೇ ದೊರೆಗೆ ಕುರಾನಿನ ವಾಕ್ಯವಾಯಿತು. ಆ ಬಳಿಕ ೩ನೇ ಮಹಮ್ಮದಶಹನು ಕಣ್ಸನ್ನೆಯಿಂದ ತನ್ನ ಭಟರನ್ನು ಕರೆದ. ದೊರೆಯ ಭಟರಿಗೆ ಏನು ಮಾಡಬೇಕೆಂಬುದು ಸರಿಯಾಗಿ ಗೊತ್ತಿತ್ತು. ದೊರೆಯ ಎದುರಿನಲ್ಲಿಯೇ ಭಟರು ಗವಾನನ ರುಂಡವನ್ನು ಕತ್ತರಿಸಿದರು. ಈ ಘಟನೆ ಸುಮಾರು ಕ್ರಿ. ಶ. ೧೪೮೧ ರಲ್ಲಿ ನಡೆಯಿತು. ಗವಾನನು

ತನ್ನ ಕೊಲೆಯಾಗುವ ಕೆಲವು ಕ್ಷಣಗಳ ಮೊದಲು ಈ ಕೆಳಗಿನಂತೆ ಉದ್ಗರಿಸಿದ್ದಾನೆ.

"The death of an old man like me is of little moment to himself, but to you ( Mahammad shah ) it will prove the ruin of an empire and of your own glory."

ಮಹಮೂದ ಗವಾನನ ಕೊಲೆ ಅವನ ೭೩ನೇ ವಯಸ್ಸಿನಲ್ಲಿ ನಡೆಯಿತು. ಗವಾನನ ಕೊಲೆಯಾದ ಕೆಲವೇ ವರುಷಗಳಲ್ಲಿ, ಅವನು ನುಡಿದಂತೆ ಬಹಮನಿ ರಾಜ್ಯ ಅವನತಿಯ ದಾರಿಯನ್ನು ಹಿಡಿಯಿತು. ೩ನೇ ಮಹಮ್ಮದಶಹನಿಗೆ ಮರುವರುಷವೇ ತಲೆ ಕೆಟ್ಟಿತು. ಗವಾನನನ್ನು ತಾನೇ ಕೊಲ್ಲಿಸಿದ್ದೇನೆ; ಅವನು ನಿರಪರಾಧಿ ಎಂದು ತನ್ನಷ್ಟಕ್ಕೆ ತಾನೇ ಪರಿತಪಿಸಿದ. ಮಹಮೂದ ಗವಾನನ ಹೆಸರನ್ನು ಸ್ಮರಿಸುತ್ತಲೇ ತಾನೂ ನಿಧನ ಹೊಂದಿದ. ೩ನೇ ಮಹಮ್ಮದಶಹನ ನಿಧನದ ನಂತರ ಬಹಮನಿ ರಾಜ್ಯದ ಪಟ್ಟಕ್ಕೆ ಧೀರ ಸುಲ್ತಾನನ ಮಾರ್ಗದರ್ಶನವೇ ದೊರೆಯಲಿಲ್ಲ. ಗವಾನನ ದೇಹವನ್ನು ಬೀದರಿನಿಂದ ಮೂರು ಮೈಲು ಅಂತರದಲ್ಲಿರುವ ಗೋರನಹಳ್ಳಿಯಲ್ಲಿ ಹುಗಿಯಲಾಯಿತು ಹಾಗೂ ಮುಸಲ್ಮಾನರ ಪದ್ಧತಿಯ ಪ್ರಕಾರ ಗೋರಿಯನ್ನು ಕಟ್ಟಲಾಯಿತು. ಮಹಮೂದ ಗವಾನನ ಗೋರಿ ಗೋರನಹಳ್ಳಿಯಲ್ಲಿ ಈಗಲೂ ಸುಸ್ಥಿತಿಯಲ್ಲಿದೆ. ಆ ಗೋರಿಯ ಕಲ್ಲಿನ ಮೇಲೆ ಈ ಕೆಳಗಿನಂತೆ ಬರೆಯಲ್ಪಟ್ಟಿದೆ :

"Innocent mahamood gawan was murdered."

ಈಗಲೂ ಪ್ರತಿವರುಷವೂ ಗವಾನನ ಪುಣ್ಯತಿಥಿಯನ್ನು ಅವನ ಅಭಿಮಾನಿಗಳು ಗೋರನಹಳ್ಳಿಯಲ್ಲಿ ಆಚರಿಸುತ್ತಾರೆ.

ನಮಗೆ ಗೊತ್ತಿದ್ದಂತೆ, ಮಹಮೂದ ಗವಾನನ ಕೊಲೆಯಾದ ಕೆಲವೇ ವರುಷಗಳಲ್ಲಿ ಬಹಮನಿ ರಾಜ್ಯ ೩ನೇ ಮಹಮ್ಮದ ಶಹನ ಮರಣದಿಂದ ಅಸ್ಥಿರವಾಯಿತು. ಅವನ ನಂತರ ಬಹಮನಿ ಪಟ್ಟಕ್ಕೆ ಯಾವ ಹೇಳಿಕೊಳ್ಳುವಂಥ ರಾಜರೂ ಪಟ್ಟಕ್ಕೆ ಬರಲಿಲ್ಲ. ಅಲ್ಲದೆ ಬಹಮನಿ ರಾಜ್ಯದ ದೊರೆಗಳಿಗೆ ರಾಜ್ಯಕಾರಭಾರದ ಯಾವ ಜ್ಞಾನವೂ ಇರಲಿಲ್ಲ. ಮಹಮೂದ ಗವಾನನಂಥ ನಿಷ್ಠಾವಂತ ಸೇವಕನ ಮಾರ್ಗದರ್ಶನವೂ ದೊರೆಯಲಿಲ್ಲ. ಹೀಗಾಗಿ ರಾಜ್ಯದ ಎಲ್ಲ ಸರದಾರರು ಸ್ವತಂತ್ರರಾದರು. ಎಲ್ಲೆಡೆ ರಾಜಕೀಯ ಅಶಾಂತಿ ಹಬ್ಬಿತು, ಕೊನೆಗೆ ಕ್ರಿ. ಶ. ೧೫೨೬ ರಲ್ಲಿ ಬಹಮನಿ ರಾಜ್ಯ ತುಂಡು ತುಂಡಾಗಿ ಒಡೆದು ಹೋಯಿತು ಹಾಗೂ ಐದು ಭಾಗಗಳು ತಲೆಯೆತ್ತಿದವು. ಬಿಜಾಪುರದಲ್ಲಿ ಆದಿಲ್‌ಶಾಹಿ ರಾಜ್ಯ, ಅಹಮ್ಮದ ನಗರದಲ್ಲಿ ನಿಜಾಮಶಾಹಿ ರಾಜ್ಯ, ಬಿರಾರಿನಲ್ಲಿ ಇಮಾದಶಾಹಿ ರಾಜ್ಯ, ಗೋಲಕೊಂಡದಲ್ಲಿ ಕುತುಬಶಾಹಿ ರಾಜ್ಯ ಹಾಗೂ ಬೀದರದಲ್ಲಿ ಬರೀದ ಶಾಹಿ ರಾಜ್ಯಗಳು ಸ್ವತಂತ್ರವಾಗಿ ತಲೆಯೆತ್ತಿದವು. ಇದೆಲ್ಲ ಮುಖ್ಯವಾಗಿ ಮಹಮೂದ ಗವಾನನ ಕೊಲೆಯ ಪರಿಣಾಮವಾಗಿಯೇ ಆಯಿತೆಂದು ಹೇಳಬಹುದು. ಮಹಮೂದ ಗವಾನನು ಶಾಪವನ್ನೇನೂ ಕೊಡಲಿಲ್ಲ. ಆದರೆ ನಿರಪರಾಧಿಯ ಕೊಲೆಯ ಮರುಗು ತನ್ನಷ್ಟಕ್ಕೆ ತಾನೇ ಬಹಮನಿ

ರಾಜ್ಯಕ್ಕೆ ತಟ್ಟಿತು. ಬಹಮನಿ ರಾಜ್ಯದ ಅಳಿವಿಗೆ ಗವಾನನ ಕೊಲೆಯೇ ನಾಂದಿಯಾಯಿತು. ಕೆಲವೊಂದು ಸಲ ಮಹಾಜೀವಿಗಳ ಹೇಳಿಕೆಗಳು ಸತ್ಯವಾಗಿ ಪರಿಣಮಿಸುವಂತೆ ಗವಾನನ ಮರುಗು ಸತ್ಯವಾಗಿ ಪರಿಣಮಿಸಿತು. ನಿರಪರಾಧಿ ಗವಾನನ ಕೊಲೆ ರಾಜ್ಯದ ಕೀರ್ತಿಗೆ ಕೊಡಲಿಯ ಪೆಟ್ಟಾಯಿತು. ರಾಜ್ಯದ ಸೂತ್ರಧಾರ ಕಣ್ಮರೆಯಾದಾಗಲೆಲ್ಲ ರಾಜ್ಯದ ಅವನತಿ ನಿಶ್ಚಿತವಾಗುವದು. ಅದೇ ರೀತಿ ಗವಾನನ ಕೊಲೆ ಈ ಸಂಗತಿಯನ್ನು ಸತ್ಯವಾಗಿಸಿತು

## ಮಹಮೂದ ಗವಾನನ ಜೀವನದ ಬಗೆ

ಗವಾನನ ಜೀವನದ ರೀತಿಯನ್ನು ನಾವು ಸೂಕ್ಷ್ಮವಾಗಿ ಅವಲೋಕಿಸಿದಾಗ, ಅವನ ಜೀವನ ಒಬ್ಬ ಸಾಧು-ಸತ್ಪುರುಷನ ಜೀವನದ ಬಗೆಯನ್ನೇ ಹೋಲುತ್ತದೆ. ಗವಾನನ ಬಗೆಗೆ ಈ ರೀತಿ ಹೇಳಿದರೆ ಅದೇನು ಆಶ್ಚರ್ಯದ ಸಂಗತಿಯಾಗಲಿಕ್ಕಿಲ್ಲ. ಹಾಗೂ ಕಟ್ಟುಕಥೆಯಾಗಲಿಕ್ಕಿಲ್ಲ. ಆದರೆ ನಿಜವಾಗಿಯೂ ನಡೆದು ತೋರಿಸಿದ ಒಬ್ಬ ವ್ಯಕ್ತಿಯ ಜೀವನದ ಕಥೆಯಾಗಿದೆ.

ಮಹಮೂದ ಗವಾನ ತನ್ನ ಬದುಕಿನ ಎಲ್ಲ ಆಯುಷ್ಯವನ್ನು ಬಹಮನಿ ರಾಜ್ಯದ ಏಳ್ಗೆಗೆ ಮೀಸಲಾಗಿರಿಸಿ ಹೋರಾಡಿದ. ತಾನು ರಾಜ್ಯದ ಪ್ರಧಾನ ಮಂತ್ರಿಯಾಗಿದ್ದರೂ ಸಾದಾ ಹಾಗೂ ನಿರಾಡಂಬರನಾಗಿಯೇ ಬದುಕಿದ. ಅವನಲ್ಲಿ ದರ್ಪ, ಹೆಮ್ಮೆ, ಅಸೂಯೆ, ದ್ವೇಷ ಎಂದೂ ಯಾರ ಬಗೆಗೂ ಇರಲಿಲ್ಲ. ಅಲ್ಲದೆ ದೈನ್ಯ, ನಿಷ್ಠೆ, ಪ್ರಾಮಾಣಿಕತೆ ಇವೇ ಅವನ ಶ್ರೀಮಂತಿಕೆಯ ಗುಣಗಳಾಗಿದ್ದವು. ವೈಭವದ ಹಾಗೂ ಅಧಿಕಾರದ ಮದ ಅವ

ನಲ್ಲಿ ಎಂದೂ ಸುಳಿಯಲಿಲ್ಲ. ಗವಾನನು ಯಾವ ರಾಜಕೀಯ ಆಮಿಷಕ್ಕೂ ಬಲಿಬೀಳಲಿಲ್ಲ. ತನ್ನ ದ್ವೇಷಿಗಳ ಕಪಟ ಕಾರಸ್ಥಾನಕ್ಕೆ ತಾನೇ ಬಲಿಯಾದ. ಅಂತೆಯೇ ಮಹಮೂದ ಗವಾನ ಬಹಮನಿ ರಾಜ್ಯದ ಧೀಮಂತ ವ್ಯಕ್ತಿಯಾಗಿ ಮೆರೆದ.

ಗವಾನನ ಕೊಲೆಯಾದ ನಂತರ ಅವನು ವಾಸಿಸುತ್ತಿದ್ದ ನಿವಾಸವನ್ನು ಪರೀಕ್ಷಿಸಿದಾಗ ಬಹಮನಿ ದೊರೆಗೆ ಅಲ್ಲಿ ದೊರೆತ ದ್ದೇನು ? ಕೇವಲ ಮಣ್ಣಿನ ಗಡಿಗೆ–ಮಡಿಕೆಗಳು, ಹಾಸಿಕೊಳ್ಳಲು ಒಂದು ಸಾದಾ ಚಾಪೆ, ಗವಾನನೇ ಬರೆದಿಟ್ಟಿದ್ದ ಕೆಲವು ಓಲೆಗಳು ಹಾಗೂ ಚಿಲ್ಲರೆ ಹಣ. ಮಹಮೂದ ಗವಾನನು ಬಹಮನಿ ರಾಜ್ಯದ ಪ್ರಧಾನ ಮಂತ್ರಿಯಾಗಿ, ಸುಲ್ತಾನನ ಆಪ್ತಸೇವಕನಾಗಿ, ಹಾಗೂ ಕೇಂದ್ರದ ಮುಖ್ಯ ವ್ಯಕ್ತಿಯಾಗಿದ್ದರೂ ಇಂಥ ಸಾಮಾನ್ಯ ಜೀವನವನ್ನು ನಡೆಸಿದನೆಂದರೆ ನಂಬಲು ಸಾಧ್ಯವಾಗಲಿಕ್ಕಿಲ್ಲ. ಆದರೆ ಗವಾನ ತನಗೆ ವೈಭವದ ಜೀವನವೇ ಗೊತ್ತಿಲ್ಲವೆಂಬಂತೆ ಬದುಕಿದ. ಅಂತೆಯೇ ಗವಾನ ಒಬ್ಬ ಆದರ್ಶ ವ್ಯಕ್ತಿ ಎಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ.

ಮಹಮೂದ ಗವಾನ ತನ್ನ ಉಡಿಗೆ–ತೊಡಿಗೆಗಳಲ್ಲಿಯೂ ಸಹ ಅತ್ಯಂತ ಸಾದಾಜೀವಿ. ಐಷಾರಾಮದ ಬದುಕನ್ನು ಗವಾನ ಎಂದೂ ಇಚ್ಛಿಸಲಿಲ್ಲ. ತಾನು ದುಡಿದು ಸಂಪಾದಿಸಿದ್ದರಲ್ಲಿಯೇ ತನ್ನ ಇತರ ಬೇಡಿಕೆಗಳನ್ನು ಈಡೇರಿಸಿಕೊಳ್ಳುತ್ತಿದ್ದ. ಗವಾನ ತನ್ನ ಬಿಡುವಿನ ಹಾಗೂ ವಿಶ್ರಾಂತಿಯ ಸಮಯವನ್ನು ತನ್ನ ವಿದ್ಯಾಲಯದಲ್ಲಿ ಹಾಗೂ ಮಸೀದೆಯಲ್ಲಿ ಕಳೆಯುತ್ತಿದ್ದ. ಮಹಾ ಮೇಧಾವಿಗಳ ಜೊತೆಯಲ್ಲಿ ಇರುವುದೆಂದರೆ ಅವನಿಗೆ ಒಂದು

ಸೌಭಾಗ್ಯವೇ ಸರಿ. ಗವಾನನು ಇರಾಣ, ಇರಾಕ, ಖೋರಾಸಾನ ಮುಂತಾದ ದೇಶಗಳ ಪ್ರಸಿದ್ಧ ಲೇಖಕರ, ಕವಿಗಳ ಹಾಗೂ ಧಾರ್ಮಿಕ ವ್ಯಕ್ತಿಗಳೊಂದಿಗೆ ಸಂಪರ್ಕವಿಟ್ಟುಕೊಂಡಿದ್ದ. ಅವರಿಗೆ ತನ್ನ ಬಿಡುವಿನ ವೇಳೆಯಲ್ಲಿ ಓಲೆಗಳನ್ನೂ ಬರೆಯುತ್ತಿದ್ದ. ಅದೂ ಅಲ್ಲದೆ ಪ್ರತಿ ವರುಷವೂ ತಾನು ವ್ಯಾಪಾರದಿಂದ ಗಳಿಸಿದ ಹಣವನ್ನು ವಿವಿಧ ದೇಶದ ಮೇಧಾವಿಗಳಿಗೆ ಕಾಣಿಕೆಯಾಗಿ ಕಳಿಸುತ್ತಿದ್ದ. ಜ್ಞಾನಿಗಳನ್ನು, ಸತ್ಪುರುಷರನ್ನು ಆದರಿಸಿ ಸತ್ಕರಿಸುವದೆಂದರೆ ಗವಾನನಿಗೆ ಒಂದು ಹೆಮ್ಮೆಯ ಕೆಲಸ. ತಾನೂ ಸ್ವತಃ ಗಣಿತ ಶಾಸ್ತ್ರದಲ್ಲಿ ನಿಪುಣನಾಗಿದ್ದ. ಕವಿತೆ ಬರೆಯುವಲ್ಲಿ ನಿಷ್ಣಾತನಾಗಿದ್ದ. ಲೇಖನ ಕಲೆಯಲ್ಲಿ ಹೆಸರುವಾಸಿ. ತನ್ನ ದೊರೆಯನ್ನು ಕುರಿತು ಅದೆಷ್ಟೋ ಕವಿತೆಗಳನ್ನು ಅವನು ಬರೆದಿದ್ದಾನೆ. ತನ್ನ ಕವಿತೆಗಳಲ್ಲಿ ಹಿಂದುಸ್ಥಾನದ ವರ್ಣನೆಯನ್ನು ಸಹ ಮಾಡಿದ್ದಾನೆ. ಗವಾನನು ದಂಡೆತ್ತಿ ಹೋಗಿ ಗೋವೆಯನ್ನು ಗೆದ್ದುಕೊಂಡಾಗ, ಗೋವೆಯ ನಿಸರ್ಗ ಸೌಂದರ್ಯಕ್ಕೆ ಮನಸೋತು ಗೋವೆಯನ್ನು ಭೂಮಿಯ ಮೇಲಿನ ಸ್ವರ್ಗವೆಂತಲೂ ವರ್ಣಿಸಿದ್ದಾನೆ.

ಮಹಮೂದ ಗವಾನನು ಬರೆದ ಪತ್ರಗಳ ಸಂಗ್ರಹ ಪ್ರಸಿದ್ಧವಾಗಿದೆ. **"ರಿಯೂರ್ಝು–ಎಲ್–ಇನ್‌ಸಾ"** ಕೈ ಬರೆಹದ ಪತ್ರಸಂಗ್ರಹ. ಈ ಸಂಗ್ರಹದಲ್ಲಿ ಗವಾನನು ತನ್ನ ಬಂಧುಗಳಿಗೆ, ವಿದೇಶದ ಮೇಧಾವಿಗಳಿಗೆ ಬರೆದ ಓಲೆಗಳನ್ನು ನಾವು ಕಾಣಬಹುದು. **"ಮಂರ್ಝುರ–ಎಲ್–ಇನ್‌ಸಾ"** ಎಂಬುದು ಗವಾನನ ಲೇಖನಗಳ ಸಂಗ್ರಹ. ಇದು ತುಂಬಾ ಪ್ರಸಿದ್ಧಿ ಪಡೆದಿದೆ. ಗವಾನನ ಮನೆಯಲ್ಲಿ ಸಾಕಷ್ಟು ಕೈಬರೆಹದ ಪ್ರತಿಗಳು

ದೊರೆತಿವೆ. ಅವನ ಕೈಬರೆಹ ನಿಜವಾಗಿಯೂ ಸುಂದರವಾಗಿತ್ತು ಎಂಬುದು ಅವನ ಲೇಖನ ಹಾಗೂ ಪತ್ರಗಳ ಮುಖಾಂತರವಾಗಿ ತಿಳಿದುಬಂದಿದೆ. ಲೇಖನ ಕಲೆಯ ಬಗ್ಗೆ ಗವಾನನಿಗೆ ಆಳವಾದ ಜ್ಞಾನವಿತ್ತು. ಕೆಲವೊಂದು ಸಮಯದಲ್ಲಿ ಗವಾನನು ರಸಿಕನಾಗಿಯೂ ಹಾಸ್ಯದ ಚಟಾಕಿಗಳನ್ನು ಹಾರಿಸುತ್ತಿದ್ದ. ದರ್ಬಾರಿನಲ್ಲಿ ಒಮ್ಮೆ ದೊರೆಯೊಂದಿಗೆ ಕುಳಿತಾಗ ಹೊರಗೆ ಒಂದು ಆಕಳು ಒದರಿತಂತೆ. ಗವಾನನ ಪ್ರತಿಭೆಯನ್ನು ಸಹಿಸದ ಅವನ ದ್ವೇಷಿಗಳು ಅವನನ್ನು ಅವಮಾನಗೊಳಿಸಬೇಕೆಂದು ಯೋಚಿಸಿ ಗವಾನನನ್ನು ಕುರಿತು ಆಕಳು ಏನೆಂದು ಹೇಳಿತು ಎಂದು ಸುಲ್ತಾನನ ಸಮ್ಮುಖದಲ್ಲಿಯೇ ಕೇಳಿದರು. ಸುಲ್ತಾನನೂ ಸಹ ಉತ್ಸುಕನಾಗಿ ಗವಾನನನ್ನು ಆಕಳು ಹೇಳಿದ್ದನ್ನು ಹೇಳಬೇಕೆಂದು ಒತ್ತಾಯಪಡಿಸಿದ. ಮಹಮೂದ ಗವಾನನು ಕೊಟ್ಟ ಉತ್ತರ ಬಹಳ ಮಾರ್ಮಿಕವಾಗಿದೆ. ಆಕಳು, ' ಈ ದರ್ಬಾರಿನಲ್ಲಿ ಕತ್ತೆಗಳಿವೆ. ನೀನು ಅಲ್ಲಿರಬೇಡ ' ಎಂದು ಹೇಳಿತು ಎಂದು ಹೇಳಿದನಂತೆ.

ಮಹಮೂದ ಗವಾನನು ದೀನದಲಿತರ ಗೆಳೆಯನೂ ಆಗಿದ್ದನೆಂಬುದಕ್ಕೆ ಸಾಕಷ್ಟು ಆಧಾರಗಳಿವೆ. ಗವಾನನು ಪ್ರತಿ ಶುಕ್ರವಾರ ರಾತ್ರಿ ರಾಜಧಾನಿಯ ರಸ್ತೆಗಳಲ್ಲಿ ಸಾಮಾನ್ಯ ಜೀವಿಯಂತೆ ಅಡ್ಡಾಡುತ್ತಿದ್ದ. ಹಾಗೂ ರಾಜಧಾನಿಯ ಜನರ ಸ್ಥಿತಿಯನ್ನು ತಿಳಿದುಕೊಳ್ಳುತ್ತಿದ್ದ. ಬಡವರಿಗೆ, ದೀನ-ದಲಿತರಿಗೆ ತನ್ನ ದುಡಿಮೆಯ ಹಣವನ್ನೂ ಕೊಟ್ಟು ಅವರಿಗೆ ಬಹಮನಿ ರಾಜ್ಯ ಹಾಗೂ ದೊರೆಗೆ ಒಳ್ಳೆಯದಾಗಲೆಂದು ಪ್ರಾರ್ಥಿಸಲು ಕೇಳಿಕೊಳ್ಳುತ್ತಿದ್ದ. ಗವಾನನು ಸರಕಾರದ ಬೊಕ್ಕಸವನ್ನು ತನ್ನ ಜೀವನದ ಯಾವ

ಕಾರ್ಯಕ್ಕೂ ಬಳಸಿಕೊಳ್ಳುತ್ತಿರಲಿಲ್ಲ. ಗವಾನನ ವಿಶಾಲ ಮನಸ್ಸು ಹಾಗೂ ಔದಾರ್ಯಗಳು ನಮಗ ಆಶ್ಚರ್ಯವನ್ನುಂಟುಮಾಡುತ್ತಿದ್ದರೂ ಅವನು ಇದೇ ರೀತಿಯಲ್ಲಿ ಬದುಕಿದನೆಂಬುದರಲ್ಲಿ ಯಾವ ಸಂದೇಹವೂ ಇಲ್ಲ.

ಗವಾನನು ಶಿಕ್ಷಣ ಹಾಗೂ ಧರ್ಮ ಪ್ರಸಾರದಲ್ಲಿಯೂ ಸಹ ಹೆಚ್ಚಿನ ಸೇವೆ ಸಲ್ಲಿಸಿದ. ವಿದ್ಯಾರ್ಥಿಗಳಿಗೆ, ಮೇಧಾವಿಗಳಿಗೆ, ಧಾರ್ಮಿಕ ಪುರುಷರಿಗೆ ಪ್ರಕ್ಕಟೆಯಾಗಿ ಊಟ ವಸತಿ ಕಲ್ಪಿಸಿಕೊಟ್ಟು ಅವರಿಗೆ ಸಹಾಯ ಮಾಡಿದ. ತನ್ನ ಬಾಂಧವರಿಗೆ ಹಾಗೂ ಇನ್ನಿತರರಿಗೆ ಶಿಕ್ಷಣದ ಸೌಕರ್ಯ ನೀಡಿದ. ಇದಕ್ಕೆ ಗವಾನನೇ ಕಟ್ಟಿಸಿದ ವಿದ್ಯಾಲಯವೇ ಸಾಕ್ಷಿಯಾಗಿದೆ. ಗವಾನನು ಧರ್ಮ ಭೀರುವೂ ಆಗಿದ್ದ; ಆದರೆ ಗವಾನನು ಹಿಂದೂ ಜನರನ್ನು ವಿಶೇಷವಾಗಿ ಕಾಡಿದನೆಂದು ಹೇಳುವದು ಸತ್ಯಕ್ಕೆ ದೂರವಾಗಿದೆ. ಯುದ್ಧದಲ್ಲಿ ತನ್ನ ದೊರೆಗೆ ಜಯ ಸಂಪಾದಿಸುವುದು ಅವನ ಪರಮ ಧರ್ಮ ಹಾಗೂ ಕರ್ತವ್ಯ. ಅಲ್ಲದೆ ಬಹಮನಿ ರಾಜ್ಯದ ವೈರಿಗಳನ್ನು ಸದೆಬಡಿದು ರಾಜ್ಯಕ್ಕೆ ಕೀರ್ತಿಯನ್ನು ಗಳಿಸುವುದು ಅವನಿಗೆ ಅನಿವಾರ್ಯವಾಗಿತ್ತು. ಅವನ ವೈರಿಗಳು ಹಿಂದೂ ಜನರಾಗಿದ್ದಲ್ಲಿ, ಇದರಲ್ಲಿ ಗವಾನನ ದೋಷವೇನೂ ಇಲ್ಲ. ಇಂಥ ಆದರ್ಶ ವ್ಯಕ್ತಿಗೆ ರಕ್ತಪಿಪಾಸೆ ಇತ್ತೆಂದೂ ಹಾಗೂ ಕ್ರೂರತನ ಸಹಜವಾಗಿತ್ತೆಂದೂ ನಂಬುವದು ಸಾಧ್ಯವಿಲ್ಲ. ಗವಾನನು ಇಸ್ಲಾಂ ಧರ್ಮದ ಕಟ್ಟಾ ಅನುಯಾಯಿ. ಇದರಲ್ಲಿ ಯಾವ ಸಂದೇಹವೂ ಇಲ್ಲ. ಆದರೆ ಇನ್ನುಳಿದ ಧರ್ಮ ಹಾಗೂ ಜನರನ್ನು ಅವನು ದ್ವೇಷಿಸುತ್ತಿದ್ದನೆಂಬುದಕ್ಕೆ ನಮಗೆ ಆಧಾರಗಳಿಲ್ಲ.

## ಉಪಸಂಹಾರ

ಮಹಮೂದ ಗವಾನನು ಬದುಕಿದ ರೀತಿ ಹಾಗೂ ಸಾಧಿಸಿದ ಸಿದ್ಧಿಯನ್ನು ಅವಲೋಕಿಸಿದಾಗ, ಗವಾನ ಒಂದು ಸಾಧನೆಗಾಗಿ ಬದುಕಿದನೆಂಬುದು ಸ್ಪಷ್ಟವಾಗಿ ಸಿದ್ಧವಾಗುತ್ತದೆ. ಗವಾನನು ತನಗಾಗಿ ಬದುಕಲಿಲ್ಲ. ಆದರೆ ಬಹಮನಿ ರಾಜ್ಯದ ಘನತೆಗೆ, ರಾಜ್ಯದ ಜನತೆಯ ಸುಖಶಾಂತಿ ಕಲ್ಯಾಣಕ್ಕಾಗಿ ಬದುಕಿದ. ಗವಾನನು ಮನಸ್ಸು ಮಾಡಿದ್ದರೆ ತಾನೇ ಬಹಮನಿ ರಾಜ್ಯದ ದೊರೆಯಾಗಿ ಮೆರೆಯಬಹುದಾಗಿತ್ತು. ಅಷ್ಟು ಶಕ್ತಿ ಹಾಗೂ ಪ್ರತಿಭೆ ಅವನಲ್ಲಿತ್ತು. ಆದರೆ ಗವಾನ ಅನ್ನ ಉಂಡ ರಾಜ್ಯದ ನಿಜವಾದ ಸೇವಕನಂತೆ ಬಾಳಿ ಕೊನೆಗೆ ತನ್ನ ಪ್ರಾಣವನ್ನೇ ಧಾರೆಯೆರೆದ. ತಾನು ಸಾಯುವಾಗಲೂ ಸಹ ಬಹಮನಿ ರಾಜ್ಯದ ಹಿತಚಿಂತನೆಯನ್ನೇ ಮಾಡಿದ.

ಅವನ ಇಡಿಯ ಜೀವನವೇ ಆದರ್ಶಮಯವಾಗಿದೆ. ಬಹಮನಿ ರಾಜ್ಯದ ಪ್ರೀತಿಯ ವ್ಯಕ್ತಿ, ಪ್ರಧಾನ ಮಂತ್ರಿ ಹಾಗೂ ಮಹಾದಂಡನಾಯಕ ಈ ರೀತಿ ಆದರ್ಶ ವ್ಯಕ್ತಿಯಾಗಿದ್ದುದು ಬಹಮನಿ ರಾಜ್ಯದ ಸುದೈವವೆಂದೇ ಹೇಳಬೇಕು. ತಾನು ರಾಜ್ಯದ ಸೂತ್ರಧಾರನಾದರೂ, ತನ್ನ ಬಗೆಗೆ ಎಂದೂ ಹೆಮ್ಮೆಪಡಲಿಲ್ಲ; ಹಾಗೂ ಇನ್ನುಳಿದವರ ಬಗೆಗೆ ಎಂದೂ ದ್ವೇಷಾಸೂಯೆಯ ಭಾವನೆ ತಳೆಯಲಿಲ್ಲ. ತನ್ನ ದೊರೆಯ ಸೇವೆಯೇ ಅವನಿಗೊಂದು ಪರಮ ಪೂಜೆ ಹಾಗೂ ಕರ್ತವ್ಯ. ಇಂಥ ಧೀಮಂತ ವ್ಯಕ್ತಿಯಾದ ಗವಾನನನ್ನು ಹಿನೇ ಮಹಮ್ಮದಶಹನು ಅದು ಹೇಗೆ

ಕೊಲ್ಲಿಸಿದನೋ ? ತಿಳಿಯಲಾರದ ಒಗಟಿನಂತಿದೆ. ಗವಾನನ ಕೊಲೆಯಾಯಿತೆಂದ ಮಾತ್ರಕ್ಕೆ ಆವನಲ್ಲಿ ದೋಷವಿತ್ತೆಂದು ಭಾವಿಸುವುದು ತಪ್ಪು. ಸಾಮಾನ್ಯವಾಗಿ ಮಹಾವ್ಯಕ್ತಿಗಳು ಕೊಲೆ ಮಾಡಲ್ಪಟ್ಟಿದ್ದರೆ ಕೆಲವೊಂದು ಸಲ ಮಿಥ್ಯಾರೋಪಕ್ಕೆ ಗುರಿಯಾಗಿ ತಮ್ಮ ಪ್ರಾಣ ಧಾರೆಯೆರೆದಿದ್ದಾರೆ. ಇಂಥ ವ್ಯಕ್ತಿಗಳ ಮಾಲಿಕೆಯಲ್ಲಿ ಗವಾನನೂ ಒಬ್ಬನೆಂದರೆ ತಪ್ಪೇನಿಲ್ಲ.

ಏನೇ ಆಗಲಿ, ಮಹಮೂದ ಗವಾನ ಒಬ್ಬ ಶ್ರೇಷ್ಠ ಐತಿಹಾಸಿಕ ವ್ಯಕ್ತಿ ಎಂಬುದರಲ್ಲಿ ಸಂದೇಹವಿಲ್ಲ. ಇತಿಹಾಸ ಹುಟ್ಟಿ ಸಾಯುವ ಎಲ್ಲ ವ್ಯಕ್ತಿಗಳನ್ನು ತನ್ನ ಪುಟಗಳಲ್ಲಿ ಸೇರಿಸುವದಿಲ್ಲ. ಆದರೆ ಯಾವ ವ್ಯಕ್ತಿಯಿಂದ ಯಾವದೇ ರಂಗದಲ್ಲಿಯಾಗಲಿ ವಿಶಿಷ್ಟವಾದ ಕೊಡುಗೆ ಸಂದಿದ್ದರೆ, ಹಾಗೂ ಆ ವ್ಯಕ್ತಿಯ ಕೊಡುಗೆಯಿಂದ ಆ ಕಾಲದ ಜನಾಂಗ ಪ್ರಭಾವಿತವಾಗಿದ್ದರೆ, ಅಂಥ ವ್ಯಕ್ತಿ ಇತಿಹಾಸದ ಪುಟಗಳಲ್ಲಿ ಸಹಜವಾಗಿ ಬದುಕಿ ಉಳಿಯುತ್ತಾನೆ. ಬಹಮನಿ ರಾಜ್ಯದ ಇತಿಹಾಸದಲ್ಲಿ ಅದೆಷ್ಟೋ ರಾಜರ ಹೆಸರುಗಳನ್ನು ನಾವು ಕೇಳುತ್ತೇವೆ. ಆದರೆ ಅದೇ ರಾಜ್ಯದ ಇತಿಹಾಸದಲ್ಲಿ ಗವಾನನು ಮಾತ್ರ ಮರೆಯದ ಧೀಮಂತ ವ್ಯಕ್ತಿಯಾಗಿದ್ದಾನೆ. ಬಹಮನಿ ರಾಜ್ಯಕ್ಕೆ ವಿವಿಧ ಮುಖವಾಗಿ ಸೇವೆ ಸಲ್ಲಿಸಿದ ಕಾರಣಪುರುಷನಾಗಿ ಮಹಮೂದ ಗವಾನನ ಹೆಸರು ಇಂದಿಗೂ ಉಳಿದುಕೊಂಡಿದೆ.

————

## ಆಧಾರಗ್ರಂಥಗಳು

1 Bidar its history and monuments
by Gulam Yazdani

2 Muslim Rule in India
by V. D. Mahajan

3 History of India vol. II
by S. Sathianathier

4 Yadgara–e–Mahamood Gawan
by Mohomad Shafiuddin Ahmad

5 Mahamood Gawan
by Mohomad Zahiruddin

೧೯ ಸೌರವ್ಯೂಹ (ದ್ವಿ. ಮು.) —ಸಿ. ಎನ್. ಶ್ರೀನಿವಾಸ ಅಯ್ಯಂಗಾ

೨೦ ಪ್ರಾಚೀನ ಭಾರತದಲ್ಲಿ ಸಾಮಾಜಿಕ ಜನಜೀವನ (ದ್ವಿ. ಮು.)
—ಸಿ. ವ್ಹಿ. ರಂಗಸ್ವಾಮಿ

೨೧ ಸಮಾಜಕಾರ್ಯ (ದ್ವಿ. ಮು.)—ಎಚ್. ಎಮ್. ಮರುಳಸಿದ್ಧಯ

೨೨ ಸಂಸತ್ತಿನ ಕಾರ್ಯಪದ್ಧತಿ ( ,, ) —ಎ. ಎಂ. ರಾಜಶೇಖರಯ್

೨೩ ಕನ್ನಡ ನಾಡಿನ ಶಾಸನಗಳು ( ,, ) —ಪಿ. ಬಿ. ದೇಸಾಯಿ

೨೪ ಕವೀಂದ್ರ ರವೀಂದ್ರರು ( ,, ) —ಸ. ಸ, ಮಾಳವಾಡ

೨೫ ನಾಗಾನಂದ ( ,, ) —ಎಚ್. ಪಿ. ಮಲ್ಲೇದೇವರು

೨೬ ಜೀವನದಲ್ಲಿ ನಗೆ ( ,, ) —ಎಂ. ಎಸ್. ಸುಂಕಾಪು

೨೭ ಬಸವಣ್ಣನವರ ಯೋಜನೆಗಳು( ,, ) —ಬಿ. ಸಿ. ಜವ

೨೮ ೧೮೫೭ರ ಕ್ರಾಂತಿ ( ,, ) —ಸಿ. ವೀರಬಸಣ್ಣ

೨೯ ಕನ್ನಡ ಕಥಾಸೃಷ್ಟಿ ( ,, ) —ಬಿ. ಬಿ. ಮಹೀಶವಾಡಿ

೩೦ ಸಂಸ್ಕೃತ ಸಾಹಿತ್ಯದಲ್ಲಿ ಶೃಂಗಾರ ರಸ( ,, ) —ಕೆ. ಕೃಷ್ಣಮೂರ್ತಿ

೩೧ ನೀರಾವರಿ ಬೇಸಾಯ ( ,, ) —ಎಸ್. ಎ. ಹೊಸಮನಿ

೩೨ ಸಾರ್ವಜನಿಕ ಅಭಿಪ್ರಾಯ —ಎನ್. ರಾಜಗೋಪಾಲರಾವ

೩೩ ಕನ್ನಡ ಕಾವ್ಯಗಳಲ್ಲಿ ಕಿರಾತಾರ್ಜುನ ಪ್ರಸಂಗ (ದ್ವಿ. ಮು.)
—ದೇವೇಂದ್ರಕುಮಾರ ಹಕಾರಿ

೩೪ ಕನ್ನಡಕ್ಕೆ ಪುರಂದರದಾಸರು ನೀಡಿದ ಕೊಡುಗೆ (ದ್ವಿ. ಮು.)
—ಜಿ. ಡಿ. ನಾಡಕರ್ಣಿ

೩೫ ಫ್ಯಾಶನ್ನುಗಳು (ದ್ವಿ. ಮು.) —ಕೆ. ಡಿ. ತಂಗೋಡ

೩೬ ಮಹಾಕವಿ ರಾಘವಾಂಕನ ಪಾತ್ರಗಳಲ್ಲಿ ತತ್ವನಿಷ್ಠೆ (ದ್ವಿ. ಮು.)
—ಬಿ. ವ್ಹಿ. ಮಲ್ಲಾಪುರ

೩೭ ಅಭಿವೃದ್ಧಿ ಯೋಜನೆಗಳಲ್ಲಿ ಸಹಕಾರದ ಪಾತ್ರ (ದ್ವಿ. ಮು.)
—ಎಸ್. ಜಿ. ಕರಭಂಟನಾ

೩೮ ಕನ್ನಡ ಜೈನ ಪುರಾಣಗಳು (ದ್ವಿ. ಮು.) —ಸದಾನಂದ ನಾಯಕ

೩೯ ಕನ್ನಡ ನಾಟ್ಯಸೃಷ್ಟಿ —ಎಚ್. ಜಿ. ಲೋಕೂ

೪೦ ಹರಿಹರನು ಚಿತ್ರಿಸಿದ ಶಿವಶರಣೆಯರು (ದ್ವಿ. ಮು.) —ಬಿ. ಬಿ. ಹೆಂಡಿ

೪೧ ನೀವು ಬಯಸುವ ಮಗು ಗಂಡೊ ? ಹೆಣ್ಣೊ ? (ದ್ವಿ. ಮು.) —ಕೆ. ಆರ್. ರಾಮಸ್ವಾಮಿ

೪೨ ಆಂಡಯ್ಯ —ಬಿ. ಎಸ್. ಕುಲಕರ್ಣಿ

೪೩ ಬೆಳವಲ ನಾಡಿನ ಬೆಳೆಗಳು —ಎಸ್. ಎ. ಹೊಸಮನಿ

೪೪ ಜಾನಪದ ಕಥೆಗಳು (ದ್ವಿ. ಮು.) —ಎಲ್. ಆರ್. ಹೆಗಡೆ

೪೫ ಸುಧಾರಿಸಿದ ಬೇಸಾಯ —ಎ. ಸಿ. ಕಲ್ಯಾಣಿಮಠ

೪೬ ಕನ್ನಡ ನಾಡಿನ ಐತಿಹಾಸಿಕ ಮಹಾಪುರುಷರು —ಬಿ. ಆರ್. ಗೋಪಾಲ

೪೭ ಗ್ರಂಥಾಲಯದ ಅಂತರಂಗ (ದ್ವಿ. ಮು.) —ಎಸ್. ಆರ್. ಗುಂಜಾಳ

೪೮ ಸ್ತ್ರೀ ಮತ್ತು ಶಿಕ್ಷಣ ( ,, ) —ವನಮಾಲಾ ಅಚಾರ್

೪೯ ಜಾಗತಿಕ ಸರಕಾರ —ಸಿ. ವೀರಬಸಣ್ಣ

೫೦ ಸಮುದಾಯ ಸಂಘಟನೆ —ಎಚ್. ಎಂ. ಮರುಳಸಿದ್ಧಯ್ಯ

೫೧ ಅಶೋಕನ ಧರ್ಮಶಾಸನಗಳು —ಎಸ್. ಎಚ್. ರಿತ್ತಿ

೫೨ ಪ್ರಾಚೀನ ಭಾರತದ ರಾಜ್ಯಪದ್ಧತಿ (ದ್ವಿ. ಮು.) —ಸಿ. ವ್ಹಿ. ರಂಗಸ್ವಾಮಿ

೫೩ ಅಕ್ಕಮಹಾದೇವಿ ಮತ್ತು ಮೀರಾಬಾಯಿ ( ,, ) —ಎಸ್. ಎಸ್. ಕಬ್ಬಿನ

೫೪ ಕನ್ನಡ ಕಾವ್ಯದಲ್ಲಿ ವೀರರಸ ನಿರೂಪಣೆ —ಬಿ. ಬಿ. ಮಹೀಶವಾಡಿ

೫೫ ಹರಿಹರ ಮಹಾಕವಿಯ ಕೆಲವು ಮಹೋನ್ನತ ವಿಚಾರಗಳು —ಬಿ. ಸಿ. ಜವಳಿ

೫೬ ಭಾರತ ರಾಜ್ಯಘಟನೆ —ಎಂ. ಎಸ್. ಪಾಟೀಲ

೫೭ ಪಂಚಾಯತಿ ರಾಜ್ಯ —ಎಸ್. ಜಿ. ಕರಭಂಟನಾಳ ಮತ್ತು ಕೆ. ಡಿ. ಬಸವ

೫೮ ವಿಷಮಜ್ವರ —ಟಿ. ಎಸ್. ಶಂಕರ್

೫೯ ಪುಸ್ತಕ ಭಾಂಡಾರ ಕಾಯದೆ —ಜಿ. ಎಂ. ಪಾಟೀಲ

೬೦ ಸರ್ ಐಸಾಕ್ ನ್ಯೂಟನ್ —ಆರ್. ವ್ಹಿ. ಅಬ್ಬೀಗೇರಿ

೬೧ ಗ್ರಾಮಾಭ್ಯುದಯದ ಯೋಜನಾಂಗಗಳು —ಟಿ. ಕೆ. ಮೇಟಿ

೬೨ ಹರಿಜನರ ಸಮಸ್ಯೆಗಳು ಹಾಗೂ ಅವುಗಳ ಪರಿಹಾರ —ಎನ್. ಕೆ. ಕಡೆತೋಟದ

೬೩ ರಾಸಾಯನಿಕ ಕಿಣ್ವಗಳು —ಎಂ. ಎಸ್. ಎಸ್. ರಾವ್

೬೪ ಪ್ರಜಾಪ್ರಭುತ್ವದ ಮೂಲ ತತ್ವಗಳು —ಕೆ. ಬಿ. ಬಕ್ಕಪ್ಪ